

# ಬೀದರ ಜಿಲ್ಲೆಯ ದೇವರೋತ್ಸವಗಳು – ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ, ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಮಹಾದೇವಿ ಹೆಬ್ಬಾಳೆ**

ಮಾರ್ಗದರ್ಶಕರು

**ಡಾ. ಸೋಮನಾಥ ಯಾಳವಾರ**

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ



ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಡಿಸೆಂಬರ್ ೨೦೦೭

# ಪ್ರಮಾಣ ಪತ್ರ

**ಬೀದರ ಜಿಲ್ಲೆಯ ದೇವರೋತ್ಸವಗಳು - ಒಂದು ಅಧ್ಯಯನ** ಎಂಬ ನಿಬಂಧವನ್ನು ಡಾ. ಸೋಮನಾಥ ಯಳವಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಕ.ರಾ.ಶಿ ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 15/11/07

ಮಹಾದೇವಿ ಹೆಬ್ಬಾಳೆ

ಎಂ.ಫಿಲ್. ವಿದ್ಯಾರ್ಥಿನಿ

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ

# ಮಾರ್ಗದರ್ಶಕರ ಪ್ರಮಾಣ ಪತ್ರ

**ಬೀದರ ಜಿಲ್ಲೆಯ ದೇವರೋತ್ಸವಗಳು - ಒಂದು ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಮಹಾದೇವಿ ಹೆಬ್ಬಾಳೆ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಡೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 15/11/07

ಡಾ. ಸೋಮನಾಥ ಯಳವಾರ

ಮಾರ್ಗದರ್ಶಕರು

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ.

## ಪರಿವಿಡಿ



### ಅನುಬಂಧ

## ಅಧ್ಯಾಯ : ಒಂದು : ದೇವರೋತ್ಸವಗಳ ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ

ಮನಸ್ಸಲ್ಲಿ ಭೇದ ಹುಟ್ಟಿದಾಗ ಮನಸ್ಸು ಸಂಕಲ್ಪ ಶಕ್ತಿ ಸಮರಸದ ಬಾಳ್ವೆಯ ಕಲ್ಪನೆಗಳು ಕಲುಷಿತವಾಗುತ್ತವೆ. ಎಲ್ಲ ಧರ್ಮಗಳ ಮೂಲ ಉದ್ದೇಶ ಒಂದೇ ಆಗಿದ್ದರೂ ಧಾರ್ಮಿಕ ಭಾವನೆಗಳನ್ನು ಕೆರಳಿಸುವ ಉತ್ತೇಜಿಸುವ ಪ್ರಯತ್ನ ನಡೆಯುತ್ತಲೇ ಇದೆ. ಧರ್ಮ ಪ್ರತಿಯೊಬ್ಬ ವ್ಯಕ್ತಿಯ ವೈಯುಕ್ತಿಕ ಆಚರಣೆಯಾಗಿರಬೇಕು ಎಂದು ನಮ್ಮ ಜಾನಪದೀಯರು ಹೇಳುತ್ತಲೆ ಬಂದಿದ್ದಾರೆ. ಆದರೆ ಅದು ಸಾರ್ವಜನಿಕ ಜೀವನದಲ್ಲಿ ದೋಷಿಗಳೊಂದಿಗೆ ಕೂಡಿ ಸಾಮಾಜಿಕ ಮೌಲ್ಯಗಳನ್ನು ಅಪವಿತ್ರಗೊಳಿಸುವ ಪ್ರಯತ್ನ ನಡೆಸುತ್ತಿದೆ.

'ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯ ಕೂಡಲ ಸಂಗಮದೇವ ನಿಮ್ಮ ಮನೆಯ ಮಗನೆಂದೆನಿಸಯ್ಯಾ' ಎನ್ನುವ ಬಸವಣ್ಣನವರ ಆಶಾಭಾವನೆಯನ್ನು ಜೀವಂತವಾಗಿಸುವ ಪ್ರಯತ್ನಗಳು ನಡೆಯಬೇಕಿದೆ. ಮಾನವೀಯತೆ ನಾಶವಾಗುತ್ತಿರುವ ಈ ಸಂದಿಗ್ಧ ಸ್ಥಿತಿಯಲ್ಲಿ ಮಾನವ ಮತ್ತು ಮನುಷ್ಯತ್ವದ ಉಳಿವಿಗಾಗಿ ಭಾತೃತ್ವದ ಭಾವೈಕ್ಯದ ಭಾವನೆಗಳನ್ನು ಬಲಪಡಿಸುವ ವಾತಾವರಣ ಹುಟ್ಟಿಸಬೇಕಾಗಿದೆ. ನಮ್ಮ ಹೃದಯ ಬುದ್ಧಿಯನ್ನು ಕಲುಷಿತಗೊಳಿಸುವವರನ್ನು ಮತ್ತು ರಾಕ್ಷಸೀ ಪ್ರವೃತ್ತಿ ಬೆಳೆಸುವವರನ್ನು ಹೊಡೆದೋಡಿಸುವ ಅರಿವು ತಂದುಕೊಳ್ಳಬೇಕಾಗಿದೆ. ಇಂಥ ಪ್ರಯತ್ನಗಳ ಕುರಿತು ವಿಚಾರ ಮಾಡುವಾಗ ದೇವರ ಉತ್ಸವಗಳು ನೆನಪಿಗೆ ಬರುತ್ತವೆ.

ಜಗತ್ತಿನ ಎಲ್ಲ ಮಾನವ ಸಮಾಜದಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ರೂಢವಾಗಿರುವ ಸಂಗತಿ ಎಚೆದರೆ ದೇವರಿಂದ ಈ ವಿಶ್ವದ ಎಲ್ಲ ಕಾರ್ಯ ಕಲಾಪಗಳು ನಡೆಯುತ್ತವೆ. ದೇವನೊಬ್ಬ ನಾಮ ಹಲವು ಎನ್ನುವಂತೆ ವಿವಿಧ ವರ್ಗದ ಜನರು ಬೇರೆ ಬೇರೆ ಹೆಸರಿನಲ್ಲಿ ದೇವರನ್ನು ಒಲಿಸಿಕೊಳ್ಳಲು ಜಪ, ತಪ, ಉಪವಾಸ, ಪೂಜೆ, ಅಭಿಷೇಕ ಮುಂತಾಗಿ ಮಾಡುತ್ತಾರೆ. ಇವೆಲ್ಲವುದರ ಉದ್ದೇಶ ಒಂದೇ ಆಗಿರುತ್ತದೆ. ಆ ದೇವರು ತಮಗೆ ಒಳಿತನ್ನೇ ಮಾಡಲೆಂಬುದೇ ಮೇಲಿನವುಗಳ ಹಿನ್ನಲೆ.

ದೇವಸ್ಥಾನಗಳು ಜನರ ಹಿತಕ್ಕಾಗಿಯೇ ಇರುತ್ತವೆ. ಅಲ್ಲಿ ಎಲ್ಲ ವರ್ಗದ ಜನರಿಗೆ ಮುಕ್ತವಾದ ಪ್ರವೇಶವಿರುತ್ತದೆ. (ಕೆಲವು ಕಡೆಗಳಲ್ಲಿ ಇರಲಿಕ್ಕಿಲ್ಲ) ಪಾಠ–ಪ್ರವಚನ, ಭಜನೆ–ಕೀರ್ತನೆ ಪ್ರಾರ್ಥನೆ, ಆರಾಧನೆ ಜರುಗುತ್ತವೆ. ಇವುಗಳನ್ನೆಲ್ಲ ಸಾಮೂಹಿಕ ಸ್ವರೂಪ ಪಡೆದು ಕೊಂಡಾಗ ಉತ್ಸವ ಎನಿಸುತ್ತದೆ.

ಬೀದರ ಜಿಲ್ಲೆಯ ದೇವರೋತ್ಸವಗಳು ವಿಶೇಷ ಸ್ಥಾನ ಪಡೆದುಕೊಂಡಿದೆ. ಮೇಲುಕೀಳೆನ್ನದೆ ಸಾಮೂಹಿಕವಾಗಿ ಎಲ್ಲರೂ ಬೆರೆಯುತ್ತಾರೆ. ದೇವರ–ದರ್ಶನ ಪಡೆಯುತ್ತಾರೆ. ತಮಗಾದಷ್ಟು ದಕ್ಷಿಣೆ ಕೊಡುತ್ತಾರೆ. ತೇರ ಎಳೆಯುತ್ತಾರೆ. ಖರೀದಿ–ಬಿಕರಿ ಮಾಡುತ್ತಾರೆ. ಉತ್ಸವಗಳಲ್ಲಿ ಬಳಗದವರನ್ನು ಭೇಟಿಯಾಗಿ ಆನಂದದಿಂದ ಮನೆಗೆ ಹಿಂದಿರುಗುತ್ತಾರೆ. ಹೀಗೆ ಮಾಡುವುದರಿಂದ ಮನಸ್ಸಿಗೆ ಶಾಂತಿ ಸಮಾಧಾನ ದೊರೆಯುತ್ತದೆ.

ದೇವರೋತ್ಸವಗಳು ನಮ್ಮ ಜನಪದ ಸಾಂಸ್ಕೃತಿಕ ಪರಂಪರೆಯ ಪ್ರಮುಖ ಆಧಾರಸ್ತಂಭಗಳಾಗಿರುವುದರಿಂದ ಗ್ರಾಮೀಣ ಬದುಕಿನ ಜೀವಂತ ನಾಡಿಮಿಡಿತಗಳಾಗಿವೆ. ಅವು ಸಾಮಾಜಿಕ, ಧಾರ್ಮಿಕ ಹಾಗೂ ಕಲಾತ್ಮಕ ಬದುಕಿನ ಜೀವಸತ್ವ ಅಲ್ಲಿ ಹಲವು ಮುಖಗಳಲ್ಲಿ ವ್ಯಕ್ತಗೊಂಡಿರುವುದನ್ನು ಕಾಣುತ್ತೇವೆ.

ದೇವರೋತ್ಸವ ಕೇವಲ ಜನ-ದನಗಳ, ವ್ಯಾಪಾರ ವಹಿವಾಟುಗಳ ಕೇಂದ್ರವಷ್ಟೇ ಅಲ್ಲ; ಅದೊಂದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಗಮ. ಉತ್ಸವಗಳ ಅಧ್ಯಯನವೆಂದರೆ ಅದೊಂದು ಸಾಂಸ್ಕೃತಿಕ ಅಧ್ಯಯನವಿದ್ದಂತೆ. ಅದರ ಹುಟ್ಟು, ಬೆಳವಣಿಗೆ, ನಂಬಿಕೆ, ಸಂಪ್ರದಾಯಗಳು, ಆಚಾರ-ವಿಚಾರ, ಇವೆಲ್ಲವನ್ನೂ ಮೈಗೂಡಿಸಿಕೊಂಡಿರುತ್ತದೆ. ದೇವರೋತ್ಸವಗಳು ಧಾರ್ಮಿಕ ಮಹತ್ವವನ್ನು ಪಡೆದಿರುವಂತೆಯೇ ಸಾಮಾಜಿಕ ಮಹತ್ವವನ್ನು ಪಡೆದುಕೊಂಡಿವೆ.

ದೇವರೋತ್ಸವಗಳು ಹಲವಾರು ದೃಷ್ಟಿಯಿಂದ ಜನರ ಜೀವನದಲ್ಲಿ ಮಹತ್ವದ ಪಾತ್ರವಹಿಸಿದೆ. ಉತ್ಸವ ಎಲ್ಲ ಕಡೆಗೂ ಕಂಡು ಬರುವ ಎಲ್ಲರನ್ನು ರಂಜಿಸುವ ಸಮಷ್ಟಿ ಬದುಕಿನ ಒಂದು ಸಂಕೀರ್ಣ ಸಾಂಸ್ಕೃತಿಕ ಮೊತ್ತವಾಗಿದೆ. ಹೀಗಿದ್ದರೂ ದೇವರ ಹೆಸರಲ್ಲಿ ನಡೆಯುವ ಉತ್ಸವಗಳ ಕುರಿತ ಕ್ರಮಬದ್ಧವಾದ ಅಧ್ಯಯನದ ಕೊರತೆ ಕಂಡು ಬರುತ್ತದೆ.

ಹಿಂದೆ ಉತ್ಸವಗಳು ಜರುಗುವಾಗ ತೇರು ಎಳೆಯುವಾಗ ವೈಭವ ಎದ್ದು ಕಾಣುತ್ತಿತ್ತು. ಎಲ್ಲ ಜಾತಿಯ ಜನರು ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ನಾವೆಲ್ಲರೂ ಒಂದೇ ಎಂಬ ಭಾವನೆ ಅವರದ್ದಾಗಿತ್ತು. ಆಧುನಿಕ ಮತ್ತು ಹೊರ ದೇಶದ ಪ್ರಭಾವವುಂಟಾಗಿ ಉತ್ಸವಗಳು ದಿನೇ-ದಿನೇ ಕಡಿಮೆಯಾಗುತ್ತಿವೆ. ಹಳ್ಳಿ ಪಟ್ಟಣದಲ್ಲಿರುವ ದೇವರ ಮೂರ್ತಿಗಳು ಮೂಲೆ ಸೇರಿವೆ. ದೇವರ ಮೆರವಣಿಗೆ ಹೋಗಿ ಜನರ ಮೆರವಣಿಗೆ ಬಳಕೆಗೆ ಬಂದಿದೆ.

ಉತ್ಸವಗಳಲ್ಲಿ ಹುಲಿ ಕುಣಿಯುವವರು, ವಾದ್ಯ ಬಾರಿಸುವವರು, ಹಾಡು ಹೇಳುವವರು ಪ್ರೋತ್ಸಾಹವಿಲ್ಲದಕ್ಕೆ ಕೂಲಿ-ನಾಲಿ ಕೆಲಸ ಮಾಡಿ ಉಪಜೀವನ ನಡೆಸುತ್ತಿದ್ದಾರೆ. ಪಲ್ಲಕ್ಕಿ ರಥೋತ್ಸವಗಳು ರಾಜಕೀಯ ವ್ಯಕ್ತಿಗಳಿಗೆ ಸೀಮಿತವಾಗಿವೆ. ದೇವರ-ದಿಂಡರ ಮೇಲಿನ ಭಕ್ತಿ ಕಡಿಮೆಯಾಗಿದೆ. ಅವುಗಳನ್ನೆಲ್ಲ ಕಳೆದುಕೊಂಡ ನಾವು ಇಂದು ಸಂದಿಗ್ಧ ವ್ಯವಸ್ಥೆಗೆ ಒಳಗಾಗಿದ್ದೇವೆ. ಈ ಹಿನ್ನಲೆಯಲ್ಲಿ ದೇವರೋತವಗಳ ಅಧ್ಯಯನ ತೀರ ಅಗತ್ಯವೆನಿಸುತ್ತದೆ. ಈ ದಿಸೆಯಲ್ಲಿ ಕಣ್ಮರೆಯಾಗಿ ಹೋಗುತ್ತಿರುವ ಸಂಪ್ರದಾಯ ಆಚರಣೆಗಳು ಹಾಗೂ ರಾಷ್ಟ್ರೀಯ ಭಾವೈಕ್ಯತೆಯ ಪ್ರತೀಕವಾದ ದೇವರೋತವಗಳು ಈ ಕುರಿತಾದ ಸಾಂಸ್ಕೃತಿಕ ಅಧ್ಯಯನದ ಅಗತ್ಯತೆಯನ್ನು ಗಮನಿಸಿ ಈ ಅಧಯಯನಕ್ಕೆ ತೊಡಗಿಸಿಕೊಳ್ಳಬೇಕಾಯಿತು.

## ದೇವರೋತ್ಸವಗಳ ವ್ಯಾಪ್ತಿ :-

ಹಿಂದಿನಿಂದಲೂ ದೇಶ ವಿದೇಶಗಳಲ್ಲಿ ಉತ್ಸವಗಳು ಜರುಗುತ್ತಾ ಬಂದಿವೆ. ಈಗಲೂ ಜರುಗುತ್ತವೆ. ಪ್ರತಿಯೊಂದು ಜನಾಂಗದ ಉತ್ಸವಗಳ ಉದ್ದೇಶ ಒಂದೇಯಾಗಿದೆ.

ಸಾಮೂಹಿಕವಾಗಿ ದೇವರನ್ನು ಆರಾಧಿಸುವುದು. ಬಂಧು ಬಳಗದವರನ್ನು ಭೇಟಿಯಾಗುವುದು, ತಮಗೆ ಇಷ್ಟವಾದ ವಸ್ತುಗಳನ್ನು ಉತ್ಸವದಲ್ಲಿ ಕೊಳ್ಳುವುದು, ಇನ್ನು ನಡಯುತ್ತಲೇ ಇವೆ. ಉತ್ಸವಗಳಲ್ಲಿ ಬಟ್ಟೆ, ಬರೆ, ಬಳೆ, ಮುಂತಾದ ವಸ್ತುಗಳ ಪ್ರದರ್ಶನ, ಮಾರಾಟಕ್ಕೂ ಅವಕಾಶ ಒದಗಿಸುತ್ತಿವೆ.

ದೇವಾಲಯವಿದ್ದಲ್ಲಿ ಉತ್ಸವ ನಡೆದೆ ಇರುತ್ತವೆ. ಕೆಲವೊಂದು ಕಡೆ ನಡೆಯಲ್ಲಿಕ್ಕಿಲ್ಲ. ಇಂದಿನ ಕಾಲದಲ್ಲಿ ಉತ್ಸವಗಳು ಕಲಾವಿದರಿಗೆ, ಕಲೆಗಳಿಗೆ ಉತ್ತಮವಾದ ಅವಕಾಶ ಕಲ್ಪಿಸಿಕೊಡುತ್ತಾ ಬಂದಿವೆ. ಕಾಲ ಬದಲಾದಂತೆ ಉತ್ಸವಗಳು ಸಹ ಹೊಸತನವನ್ನು ಕಂಡುಕೊಳ್ಳುತ್ತಿವೆ. ಹಿಂದೆ ನರಬಲಿ ಪಶುಬಲಿ ಅರೆಬತ್ತಲೆ ಸೇವೆ ಮುಂತಾದವು ನಡೆಯುತ್ತಿದ್ದವು. ಇಂದು ಅವು ಮಾಯವಾಗಿವೆ. ಹೀಗಾಗಿ ದೇವರೋತ್ಸವಗಳ ವ್ಯಾಪ್ತಿ ಇಷ್ಟೇ ಎಂದು ಹೇಳುವುದು ಕಷ್ಟವಾದರೂ ಮಾನವನ ವಿಚಾರಗಳು ದಿನೇ ದಿನೇ ಹೆಚ್ಚಾದಂತೆ ಜಾತ್ರೆಗಳಲ್ಲಿ ಕೂಡ ಬದಲಾವಣೆ ಕಂಡು ಬರುತ್ತಿದೆ.

ಬೀದರ ಜಿಲ್ಲೆಯ ದೇವರೋತ್ಸವಗಳ ಅಧ್ಯಯನದಲ್ಲಿ ಬೀದರ ಜಿಲ್ಲೆಯಲ್ಲಿ ಜರುಗುವ ಪ್ರಮುಖ ದೇವರೋತ್ಸವಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಜನರ ಮನಸ್ಸಿನ ಏರು–ಪೇರುಗಳ ಚಿತ್ರಣ, ಬಲಿ, ಆಚರಣೆ, ಹರಕೆ, ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿ ಮುಂತಾದ ವಿಷಯಗಳ ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಎರಡು :

## ದೇವರೋತ್ಸವಗಳ ಉಗಮ ಮತ್ತು ವಿಕಾಸ

೧. ದೇವರೋತ್ಸವಗಳ ಉಗಮ–ವಿಕಾಸ
೨. ದೇವರೋತ್ಸವಗಳ ಸ್ವರೂಪ–ಲಕ್ಷಣಗಳು
೩. ದೇವರೋತ್ಸವಗಳ ಪ್ರಾಮುಖ್ಯತೆ (ಮಹತ್ವ)
೪. ದೇವರೋತ್ಸವಗಳ ಪ್ರಯೋಜನ

## ಅಧ್ಯಾಯ : ಎರಡು : ದೇವರೋತ್ಸವಗಳ ಉಗಮ – ವಿಕಾಸ

### ಉಗಮ – ವಿಕಾಸ :

ಮಾನವ ಪ್ರಥಮ ಹಂತದಲ್ಲಿ ಮಂಗನಂತಿದ್ದ ಕಾಲ ಬದಲಾದಂತೆ, ಸಮಾಜ ವಿಕಾಸಗೊಂಡಂತೆ ಅವನಲ್ಲಿ ವಿಚಾರ ಮತ್ತು ತಿಳುವಳಿಕೆಗಳು ಬರಹತ್ತಿದ್ದವು. ಮನುಷ್ಯ ಎಲ್ಲ ಪಶು–ಪ್ರಾಣಿಗಳಿಗಿಂತ ಭಿನ್ನನೆಂದು ತಿಳಿದುಕೊಂಡ ಅವನಿಗೆ ಜ್ಞಾನ ಬಂತು, ತಿಳುವಳಿಕೆ ಬಂತು, ಮಾತು ಬಂತು, ಹೊಟ್ಟೆ ಪಾಡಿಗಾಗಿ ಬೇಟೆಯಾಡಲಾರಂಭಿಸಿದ. ಅಲೆಮಾರಿ ಜೀವನ ಬಿಟ್ಟು ಬಿಡಾರ ಹಾಕತೊಡಗಿದ. ಭೂಮಿಯಲ್ಲಿ ಬೆಳೆಗಳು ಬೆಳೆಯಲು ಪ್ರಾರಂಭಿಸಿದ. ಅಂತಹ ಸಮಯದಲ್ಲಿ ಪ್ರಕೃತಿಯಲ್ಲಿ ಗಾಳಿ, ಚಳಿ, ಬಿಸಿಲು, ಗುಡುಗು, ಮಿಂಚು, ಸಿಡಿಲು, ಭೂಕಂಪ, ಬೆಂಕಿ, ಬಿರುಗಾಳಿ, ಹುಟ್ಟು – ಸಾವಿನ ಪ್ರವಾಹ ಮುಂತಾದವುಗಳು ಹುಟ್ಟಿಕೊಂಡ ಅವನಿಗೆ ಹೆದರಿಕೆಯನ್ನುಂಟು ಮಾಡುತ್ತಿದ್ದವು. ಭಯಭೀತನಾಗಿ ಹೆದರಿ 'ಭಯದಿಂದಲೇ ಭಕ್ತಿ' ಎನ್ನುವಂತೆ ಭಯ ಹುಟ್ಟಿಸುವ ನಿಸರ್ಗದಲ್ಲಿ ಅದ್ಭುತ ಶಕ್ತಿಯಿದೆ ಎಂದು ತಿಳಿದು ಅವುಗಳಿಗೆ ಗೌರವ ಪವಿತ್ರ ಭಾವನೆಯಿಂದ ನೋಡಿ ಭಕ್ತಿ–ಪೂಜೆ ಮಾಡಲಾರಂಭಿಸಿದ. ಹೀಗೆ ಆಚರಣೆಗೆ ಬಂದ ಆರಾಧನೆ ಕೇವಲ ಕುಟುಂಬಗಳಿಗೆ ಮಾತ್ರ ಸೀಮಿತವಾಗಿದ್ದವು ಮುಂದೆ ಜನಸಂಖ್ಯೆ ಹೆಚ್ಚಾದಂತೆ, ನಾಗರೀಕತೆ ಬೆಳೆದಂತೆ ಆರಾಧನೆ–ಪೂಜೆಗಳು ಸಮಾಜ ಸೇರಿದವು ಬರ ಬರುತ್ತಾ ಆರಾಧನೆಯೇ (ಆಚರಣೆಗಳೇ) ಉತ್ಸವಗಳಿಗೆ ಕಾರಣವಾಯಿತು.

ಉತ್ಸವ ಎಂಬ ಪದಕ್ಕೆ ಹಬ್ಬ, ಸಮಾರಂಭ, ಸಂಭ್ರಮ ಸಡಗರ, ಮೆರವಣಿಗೆ ಎಂಬ ಅರ್ಥಗಳಿವೆ. ಉತ್ಸವ ಆರಾಧನೆಯ ಸ್ವರೂಪ ಲಕ್ಷಣ ವ್ಯಾಪ್ತಿ ಬೇರೆ ಬೇರೆಯಾದರೂ ಉದ್ದೇಶ ಮಾತ್ರ ಒಂದೇ ಆಗಿದೆ. ದೇವರೋತ್ಸವಗಳಲ್ಲಿ ದೇವರ ಆರಾಧನೇ ಇದ್ದೇ ಇರುತ್ತದೆ.

ದೇವರೋತ್ಸವಗಳ ಉಗಮವನ್ನು ಸ್ಪಷ್ಟವಾಗಿ ಹೇಳುವುದು ಕಷ್ಟವಾದರೂ ಸ್ಥೂಲವಾಗಿ ಹೇಳಬಹುದು. ಪ್ರತಿಯೊಂದು ದೇವರ ಉತ್ಸವಗಳು ದೇವರ ಪೂಜೆ ಆರಾಧನೆಯ ಹಿನ್ನಲೆಯಲ್ಲಿಯೇ ನಡೆಯುತ್ತದೆ. ಉದಾ: ಭಾರತದಲ್ಲಿನ ಪ್ರಮುಖ ದೇವರೋತ್ಸವಗಳಾದ ಶ್ರೀಶೈಲದ ಮಲ್ಲಿಕಾರ್ಜುನ ದೇವರ ಉತ್ಸವ, ಪ್ರಯಾಗದ ಕುಂಭ ಮೇಳ, ತಲಕಾಡಿನ ಪಂಚಲಿಂಗೋತ್ಸವ, ತಿರುಪತಿ ಬ್ರಹ್ಮೋತ್ಸವ ದಕ್ಷಿಣ ಕರ್ನಾಟಕದ ಕೊಳ್ಳೇಗಾಲದ ಮಹದೇಶ್ವರನ ಬೆಟ್ಟದ ಉತ್ಸವ ಮುಂತಾದವು ದೇವರ ಆರಾಧನೆಯ ಹಿನ್ನಲೆಯಲ್ಲಿರುತ್ತವೆ. ಉತ್ಸವಗಳು ಕೇವಲ ಒಂದು ರಾಜ ಮತ್ತು ರಾಷ್ಟ್ರಗಳಿಗೆ ಸೀಮಿತವಲ್ಲ. ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲೂ ಇಂಥ ದೇವರೋತ್ಸವಗಳು ನಡೆಯುತ್ತವೆ.

ದೇವರೋತ್ಸವಗಳು ಒಂದೇ ಕಾಲದಲ್ಲಿ ಅಥವಾ ಬೇರೆ ಬೇರೆ ಸಮಯದಲ್ಲಿ ಹುಟ್ಟಿಕೊಂಡಿದ್ದರೂ ನಿಧಾನವಾಗಿ ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಆಚರಣೆ ಮತ್ತು ಅನುಕರಣೆಯ ಮೂಲಕ ಬೆಳೆದು ಬಂದಿರಬೇಕು. ಉತ್ಸವಗಳು ಸಮಯ ಬದಲಾದಂತೆ ಅವುಗಳ ಸ್ವರೂಪ – ವಿಧಿ ವಿಧಾನಗಳು ಬದಲಾಗುತ್ತವೆ. ದೇವರು ಪ್ರಭಾವಶಾಲಿಯಾದರಂತೂ ಜನರ ಗದ್ದಲ–ಗೊಂದಲವು ಅಧಿಕವಾಗುತ್ತಿತ್ತು. ಒಂದು ದಿನದ

ಉತ್ಸವ ಹೆಚ್ಚು ದಿನಗಳಿಗೆ ಹಬ್ಬುತ್ತಾ ಹೋಗಿ ಕುಣಿತ ಮೆರೆತಗಳು ಕಾಣಿಸಿಕೊಂಡು ಪಟಾಕಿ-ಮದ್ದು ವೈಭವ ಆಕರ್ಷಿಕವಾಗಿದ್ದು ಅಂಗಡಿ ಮಳಿಗೆಗಳು ಜಮಾಯಿಸಿ ಜನ ಮರುಳಾಗಿ ಸೇರಿದಾಗ ಅದು ಉತ್ಸವವೆಂಬ ಸೇರಿಗೆ ಯೋಗ್ಯವಾಯಿತು.

ನಮ್ಮ ಪುರಾತನರೂ ಹಿಂದಿನಿಂದಲೂ ಹಬ್ಬ-ಹುಣ್ಣಿಮೆ ಆಚರಿಸುತ್ತಾ ಬಂದಿದ್ದಾರೆ. ಇವು ಬಿಡುವಿನ ದಿನಗಳು ಅಂದರೆ ವರ್ಷದುದ್ದಕ್ಕೂ ಮಾಡುತ್ತ ಬಂದಿರುವ ಕೆಲಸವನ್ನು ಮಾಡದೇ ಇರುವ ದಿನಗಳು ಇಂಥಹ ಕಾಲದಲ್ಲಿ ಉತ್ಸವಗಳನ್ನು ನಡೆಸಲು ನಿರ್ಧರಿಸಿರಬಹುದು. ಇನ್ನು ಹೇಳಬೇಕೆಂದರೆ ಉತ್ಸವಗಳಲ್ಲಿ ದೂರ ದೂರದ ಹಳ್ಳಿಗಳಿಂದ ಪ್ರಾಣಿಗಳ ಮೇಲೆ ಸರಕು-ಸಾಮಾಗ್ರಿಗಳನ್ನು ಹೋರಿಸಿಕೊಂಡು ಬರುತ್ತಿದ್ದರು. ಇಂತಹ ವ್ಯಾಪಾರಗಳಿಗೆ ಅವಕಾಶ ಕೊಡುವಲ್ಲಿ ಉತ್ಸವಗಳು ನೆರವಾದವು. ಒಂದು ದಿನ ನಡೆಯುವ ದೇವರೋತ್ಸವಗಳು ೨-೩ ಹತ್ತಿಪ್ಪತ್ತು ದಿನಗಳವರೆಗೂ ವಿಸ್ತರಿಸಿತು. ಕಲ್ಬುರ್ಗಿಯ ಶರಣ ಬಸವೇಶ್ವರ ಉತ್ಸವ ಹೋಳಿ ಹುಣ್ಣಿಮೆಯಿಂದ ಯುಗಾದಿ ಹಬ್ಬದ ಅಮಾವಾಸ್ಯೆಯವರೆಗೆ ಅಂದರೆ ೧೫ ದಿನಗಳು ನಡೆಯುತ್ತದೆ. ದೇವರೋತ್ಸವಗಳು ದೇವರ ಆರಾಧನೆ ಜೊತೆಗೆ ವ್ಯಾಪಾರ ವಹಿವಾಟು ಲೇವಾದೇವಿ ಮನರಂಜನೆಗೆ ಅನುವಾದವು.

ಇಂದು ಜರುಗುವ ದೇವರೋತ್ಸವಗಳು ವ್ಯಾಪಾರ ವಹಿವಾಟಿಗೆ ಮೂಲ ಪ್ರೇರಣೆಯಾಗಿದ್ದರೆ ಪ್ರಾಚೀನ ಕಾಲದಲ್ಲಿ ಜರಗುವ ಉತ್ಸವಗಳು ದೈವದ ನೆಲೆ ಹೊಂದಿದ್ದವು. ಇಲ್ಲವೆ ಗುಡಿ-ಗುಂಡಾರ, ಸಾಧು ಸತ್ಪುರುಷರ ಸಮಾಧಿಗಳ ಬಳಿಯಲ್ಲಿಯೇ ನಡೆಯುತ್ತಿದ್ದವು. ಅದಕ್ಕೂ ಒಂದು ಸಮಾಧಾನಕರ ಸಂಗತಿ ಇದೆ. ಅದೇನೆಂದರೆ ಯಾವುದಕ್ಕೂ ಜಗ್ಗದ ಮೋಸಗಾರರು ಅಲ್ಲಿ ದೇವರು- ದೈವತ್ವಕ್ಕೆ ಹೆದರಿಕೊಂಡು ಯೋಗ್ಯರೀತಿಯಲ್ಲಿ ವ್ಯಾಪಾರ ನಡೆಯಬಹುದು. ಹಾಗೂ ಶಾಂತಿ ಪಾಲನೆ ಸುಲಭವಾದೀತು ಎಂಬುದು ಜನರ ಅಭಿಪ್ರಾಯ. ರೋಮ ಮತ್ತು ಇಂಗ್ಲೇಂಡ ದೇಶಗಳಲ್ಲಿ ಬಹುತೇಕ ಉತ್ಸವಗಳು ಪವಿತ್ರ ಸ್ಥಳದಲ್ಲಿಯೇ ಹುಟ್ಟಿ ಬೆಳೆದವು ಎಂದು ಎಂ.ಎಸ್.ಕೆ. ಅಯ್ಯಂಗಾರ ಉಲ್ಲೇಖಿಸಿದ್ದು ಅರ್ಥಪೂರ್ಣವಾಗಿದೆ. ಇದಕ್ಕೆ ವ್ಯತ್ತಿರಿಕ್ತವಾದ ಒಂದು ಅಭಿಪ್ರಾಯವೆಂದರೆ ಉತ್ಸವಗಳು ಮೂಲತಃ ಧಾರ್ಮಿಕ ಸ್ವರೂಪದಲ್ಲಿದ್ದು ಮುಂದೆ ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳು ಸೇರಿಕೊಂಡು ಬೆಳೆದು ಬಂದವು.

## ದೇವರೋತ್ಸವಗಳ ಸ್ವರೂಪ - ಲಕ್ಷಣಗಳು : -

ದೇವರೋತ್ಸವ ಎಂಬ ಪದಕ್ಕೆ ಪುಣ್ಯ ಕ್ಷೇತ್ರ ದರ್ಶನ ಧಾರ್ಮಿಕ ಉದ್ದೇಶದಿಂದ ಮಾಡುವ ಪಯಣ ದೇವರೋತ್ಸವಗಳಲ್ಲಿ ದೇವರ ರಥೋತ್ಸವ ಸಂದರ್ಭದಲ್ಲಿ ಸೇರುವ ಜನರ ಸಂಭ್ರಮ, ಸಡಗರ, ಹಬ್ಬ ಎಂಬ ಅರ್ಥವಿದೆ. ಪ್ರತಿವರ್ಷ ಸಾಮಾನ್ಯವಾಗಿ ಸುಗ್ಗಿಯ ನಂತರ ದೇವರುಗಳ ಗೌರವಾರ್ಥ ಉತ್ಸವ ನಡೆಸುವ ವಾಡಿಕೆಯಿದೆ. ಹಳ್ಳಿ-ಪಟ್ಟಣಗಳ ದೇವಾಲಯ

ದರ್ಗಾ ಮತ್ತು ಚರ್ಚು ಮುಂತಾದ ಪವಿತ್ರ ಪೂಜಾಸ್ಥಳಗಳಲ್ಲಿ ಜನರು ಉತ್ಸವಗಳನ್ನು ನಡೆಸುತ್ತಾರೆ. ದೇವರ ಮೂರ್ತಿ ವಿಗ್ರಹಗಳನ್ನು ರಥದಲ್ಲಿ ಇಲ್ಲವೆ ಜೀಪು, ಲಾರಿಗಳಲ್ಲಿಟ್ಟು ವಾದ್ಯ–ಮೇಳಗಳ ಸಹಿತ ಮೆರವಣಿಗೆಯಲ್ಲಿ ಹೋಗುವರು, ಅದೇ ಸಮಯದಲ್ಲಿ ಬಾಳೆಹಣ್ಣು, ಅಳ್ಳು, ಖಾರಿಕು, ಮುಂತಾದವುಗಳನ್ನು ತೇರು ಇಲ್ಲವೆ ವಾಹಗಳ ಮೇಲೆ ಎಸೆಯುತ್ತಾ ಮುನ್ನಡೆಯುವರು. ಉತ್ಸವದ ಹೆಸರಿನಲ್ಲಿ ಸ್ಥಳ ಮತ್ತು ದೇವರ ಹೆಸರು ಸೇರಿರುತ್ತದೆ. ಉದಾ: ಬೀದರ ಜಿಲ್ಲೆಯ ಹುಮನಾಬಾದ ತಾಲ್ಲೂಕಿನಲ್ಲಿ ವೀರಭದ್ರೇಶ್ವರ ದೇವರ ದೇವಾಲಯವಿದೆ ಅಲ್ಲಿ ಪ್ರತಿ ವರ್ಷ ಜನವರಿ ೧೫ರಂದು ಉತ್ಸವ ಪ್ರಾರಂಭವಾಗಿ ೩೦ರವರೆಗೆ ಮುಂದುವರಿಯುತ್ತದೆ. ಈ ಉತ್ಸವಕ್ಕೆ ವೀರಭದ್ರೇಶ್ವರ ಉತ್ಸವ ಎಂಬ ವಾಡಿಕೆಯಿದೆ. ಅದರಂತೆಯೇ ಕಲ್ಬುರ್ಗಿ ಶರಣಬಸವೇಶ್ವರ ದೇವರೋತ್ಸವ, ಖಾನಪುರದ ಮೈಲಾರ ಲಿಂಗೇಶ್ವರೋತ್ಸವ, ಬಸವಕಲ್ಯಾಣದ ಬಸವೋತ್ಸವ ಹೀಗೆ ದೇವರು ಮತ್ತು ಸ್ಥಳದ ಹೆಸರು ಕೂಡಿಸಿ ಕರೆಯುವ ಪದ್ಧತಿ ಈ ಪ್ರದೇಶದಲ್ಲಿದೆ. ಇದರ ಉದ್ದೇಶ ಉತ್ಸವದ ಹೆಸರು ತಕ್ಷಣ ತಿಳಿಯಲೆಂಬುದೇ ಆಗಿರುತ್ತದೆ.

ಉತ್ಸವಗಳು ಸಮಾರಂಭಗಳು ನೋಟಕ್ಕಾಗಿ, ಸಂಭ್ರಮದ ಓಡಾಟಕ್ಕಾಗಿ ಹುಟ್ಟಿಕೊಂಡಿರುತ್ತವೆ. ಏಕೆಂದರೆ ಹತ್ತಾರು ಸ್ಥಳಗಳಿಂದ ಜನರು ಒಂದೆಡೆ ಸೇರಿ ಹರಟೆ ಹೊಡೆಯುವುದು, ಅಂಗಡಿಯಿಂದ ಅಂಗಡಿಗೆ ಅಲೆಯುವುದು ಸರಕು ಸಾಮಾನು ಖರದೀಸುವುದು ನಡೆದೆ ಇರುತ್ತದೆ. ಹೀಗಾಗಿ ಯಾವ ಕಡೆ ನೋಡಿದರೂ ಜನರೇ ಜನರು ಕಾಣಿಸಿರುತ್ತಾರೆ. ರಾತ್ರಿ ಹೊತ್ತಿನಲ್ಲಿ ಭಜನೆ, ಕೀರ್ತನೆ, ಪ್ರವಚನ, ಉಪನ್ಯಾಸ ಮನರಂಜನೆ ಕಾರ್ಯಕ್ರಮಗಳು ಇರುತ್ತವೆ. ಕೆಲವು ಕಡೆ ದೇವರ ಹೆಸರಿನಲ್ಲಿ ಅನ್ನ ಸಂತರ್ಪಣೆ ನಡೆಯುತ್ತದೆ. ಇದನ್ನು ಖಾಂಡ ಎಂದು ನಮ್ಮ ಬೀದರ ಭಾಷೆಯಲ್ಲಿ ಕರೆಯುತ್ತಾರೆ.

ನಗರ ಪಟ್ಟಣಗಳಲ್ಲಿ ನಡೆಯುವ ದೇವರೋತ್ಸವಗಳು ವೇದ–ಆಗಮ ವಿಧಿ–ವಿಧಾನ ಆಗಮೋಕ್ತವಾಗಿ ನಿರ್ದಿಷ್ಟ ಸಮಯದಲ್ಲಿ ನಡೆಯುತ್ತವೆ. ಉದಾ: ಬೀದರ ಜಿಲ್ಲೆಯ ಮಾಣಿಕನಗರ ಮಾಣಿಕ ಪ್ರಭುವಿನ ಉತ್ಸವ, ದತ್ತ ಮಠದ ಉತ್ಸವ ಮೊದಲಾದವನ್ನು ಈ ಸಮಯದಲ್ಲಿ ಹೆಸರಿಸಬಹುದು. ನಗರಗಳಲ್ಲಿ ನಡೆಯುವ ಉತ್ಸವಗಳಲ್ಲಿ ರಥೋತ್ಸವ, ತೇರು ಎಳೆಯುವುದು, ಕಂಸಾಳೆ ನೃತ್ಯ, ವಸ್ತು ಪ್ರದರ್ಶನ, ಮಾರಾಟ ಮಳಿಗೆಗಳು, ಕುಸ್ತಿ ಸ್ಪರ್ಧೆ, ಮಲ್ಲಗಂಬ ಏರುವ ಸ್ಪರ್ಧೆ, ಮುಂತಾದವು ನಡೆಯುತ್ತದೆ. ಹಳ್ಳಿಗಳಲ್ಲಿ ಗ್ರಾಮದ ಹೆಣ್ಣು ದೇವರ ಅಥವಾ ಗಂಡು ದೇವರ ಉತ್ಸವಗಳೇ ಪ್ರಮುಖವಾಗಿರುತ್ತವೆ. ಕುರಿ, ಕೋಳಿ, ಕೋಣಗಳ ಬಲಿ ಅಲ್ಲಿರುತ್ತದೆ. ಇವು ಏಳು ವರ್ಷಿಗೊಮ್ಮೆ ಚೌಡಮ್ಮ, ಕರೆಮ್ಮ, ಮಾರೆಮ್ಮ ಮುಂತಾದ ದೇವರೋತ್ಸವ ನಡೆಯುತ್ತವೆ. ಈ ಸಂದರ್ಭದಲ್ಲಿ ಹಾವುಗಾರಾಟ, ಭೂತೇರು, ಡೊಂಬರಾಟ, ಬುರ–ಬುರ ಪೋಚಮ್ಮ ಮುಂತಾದವರು ತಮ್ಮ ತಮ್ಮ ವೃತ್ತಿ ಕಲೆಗಳನ್ನು ತೋರಿಸುತ್ತ ಕೂದಲನ್ನು ಕೊರಳಿಗೆ ಹಾಕಿಕೊಂಡು ಕುಣಿಯುತ್ತ ಭಕ್ತಜನರಿಂದ ಕಾಣಿಕೆ ಪಡೆದುಕೊಳ್ಳುವರು. ಕಾಯಿ–ಕರ್ಪೂರ, ದನ–ಕರು, ತಾಳ–ಮೇಳ, ವ್ಯಾಪಾರ, ಮಾರಾಟ, ಧ್ವನಿವರ್ಧಕ, ಜೂಜು–ಗೂಜು, ಮೋಟು–ಖಾಟು, ಅಯ್ಯ–ಅಪ್ಪಂದಿರು, ಹುಡುಗ

ಹುಡುಗಿಯರ ಮಾತುಗಳಿಂದ ಕಿವಿ ಕಿರ್ರ್ ಎನ್ನುತ್ತದೆ. ಇಂಥ ದೇವರೋತ್ಸವಗಳ್ಲಿ ಸಾಕಷ್ಟು ಸಂಚಾರಿ ಚಿತ್ರ ಮಂದಿರ, ಕಂಪನಿ ನಾಟಕಗಳ ಥಿಯೇಟರಗಳ ಮಾಲೀಕರು ಚಿಲ್ಲರೆ ಹಣದಿಂದ ತಮ್ಮ ಖಜಾನೆಯನ್ನು (ಚೀಲವನ್ನೇ) ತುಂಬುವ ತರಾ–ತುರಿಯಲ್ಲಿರುತ್ತಾರೆ. ಕೈಚಳಕದ ಪ್ರದರ್ಶನಗಳಾದ ನರ್ತನ ಕೂಟಗಳು ಭಕ್ತಜನರನ್ನು ಕೈಮಾಡಿ ಕರೆಯುತ್ತಿರುತ್ತವೆ.

**ದೇವರೋತ್ಸವಗಳ ಪ್ರಾಮುಖ್ಯತೆ :**

ದೇವರೋತ್ಸವಗಳ ಪ್ರಾಮುಖ್ಯತೆಯನ್ನು ಕುರಿತು ಚರ್ಚಿಸುವಾಗ ಉತ್ಸವ ಅಥವಾ ಸಮಾರಂಭ ಎಂದೊಡನೆ ಪ್ರತಿಯೊಬ್ಬನ ಮನದಲ್ಲಿ ಸಂತಸದ ಚಿಲುಮೆ ಚಿಮ್ಮುತ್ತದೆ. ಹಿಗ್ಗಿನಿಂದ ಮೈ–ಮನಸ್ಸುಗಳೆರಡು ಹೂವಾಗುತ್ತದೆ. ವರ್ಷಕೊಮ್ಮೆ ಅಥವಾ ೨–೩ ವರ್ಷಿಗೊಮ್ಮೆ ಬರುವ ದೇವರೋತ್ಸವಗಳನ್ನು ಬಡವ–ಬಲ್ಲಿದ, ಶ್ರೀಮಂತರು, ಮಧ್ಯಮರು, ಹಿರಿಯರು–ಕಿರಿಯರು ಹರ್ಷದಿಂದ ಸ್ವಾಗತಿಸುತ್ತಾರೆ. ಹಳ್ಳಿಗಳಲ್ಲಿನ ಉತ್ಸವಗಳು ಬಹಳ ಪ್ರಿಯವಾದರೂ ನಗರದಲ್ಲಿನ ಪ್ರಭಾವ ಕಡಿಮೆಯಾಗಿಲ್ಲ. ಹಳ್ಳಿಗಾಡಿನ ಬಡರೈತರಿಗೆ ಮನರಂಜನೆಯ ಸೌಕರ್ಯಗಳು ಯಾವಾಗಲೂ ಲಭಿಸುವುದಿಲ್ಲ. ಇಂಥವರಿಗೆ ದೇವರಿಗಾಗಿ ನಡೆಯುವ ಉತ್ಸವಗಳು ಎಂದರೆ ಅತೀವ ಸಂತೋಷ ಉತ್ಸವದ ಸಮಯದಲ್ಲಿ ಮಕ್ಕಳು ಹರೆಯದ ಹುಡುಗ–ಹುಡುಗಿಯರಿಗೆ ಉತ್ಸವದಷ್ಟೇ ಉತ್ಸಾಹ ಅವರಲ್ಲಿರುತ್ತದೆ. ಸಂತಸದಿಂದ ಲವಲವಿಕೆಯಿಂದ ಅಂಗಡಿಯಿಂದ ಅಂಗಡಿಗೆ ಅಲೆಯುತ್ತ ತಿನಿಸುಗಳನ್ನು ತಿನ್ನುತ್ತಾ ಬಾಯಿ ಚಪ್ಪರಿಸುವರು. ಹುಡಗಿಯರು ಬಳೆಗಳೂ, ಬಿಂದಿಗಳೂ, ಬಣ್ಣ ಬಣ್ಣದ ರಿಬ್ಬನ್‌ಗಳು ಮುಖಕ್ಕೆ ಹಚ್ಚುವ ಸಾಧನ ಸಾಮಾಗ್ರಿಗಳನ್ನು ಕೊಳ್ಳುವರಾದರೆ ತಾಯಂದಿರು, ವಯಸ್ಕರು ತಮ್ಮ ಜೀವನೋಪಾಯಕ್ಕೆ ಬೇಕಾಗುವ ವಸ್ತುಗಳನ್ನು ಖರೀದಿಸುತ್ತಾರೆ. ಮಕ್ಕಳು ಬಗೆ ಬಗೆಯ ಬಣ್ಣ–ಬಣ್ಣದ ಬಲೂನ (ಘುಗ್ಗಾ), ಆಟಿಕೆ ಸಾಮಾನುಗಳನ್ನು ಖರೀದಿ ಮಾಡುತ್ತಾರೆ. ಇಂಥ ಉತ್ಸವಗಳಲ್ಲಿ ಉಯ್ಯಾಲೆ, ತೊಟ್ಟಿಲು ಮುಂತಾದ ಮನರಂಜನಾ ಮಾಧ್ಯಮಗಳು ಬಂದಿರುತ್ತವೆ.

ದೇವಾಲಯ ಮತ್ತು ದೇವರ ತೇರಿಗೆ ಥಳ–ಥಳಿಸುವ ವಿದ್ಯುತ್ ದ್ವೀಪಗಳನ್ನು ಅಳವಡಿಸುತ್ತಾರೆ. ಬಣ್ಣ–ಬಣ್ಣದ ಹೂಗಳಿಂದ ಅಲಂಕರಿಸಿ ಅಂದ ಚಂದವಾಗಿ ಕಾಣುವಂತೆ ನೋಡಿಕೊಳ್ಳುತ್ತಾರೆ. ಉತ್ಸವಕ್ಕೆ ಬಂದ ಭಕ್ತರು ದೇವಾಲಯದ ವೈಭವ ನೋಡುತ್ತಾ ದೈವತ್ವಕ್ಕೆ ಶರಣಾಗುವರು. ಅಂಥ ಸಂದರ್ಭದಲ್ಲಿ ಭಕ್ತರ ಭಕ್ತಿ ಜಯಘೋಷಗಳು ಮುಗಿಲು ಮುಟ್ಟುವಂತಿರುತ್ತದೆ. ರಾತ್ರಿ ಹೊತ್ತಿನಲ್ಲಿ ಪ್ರತಿಯೊಬ್ಬ ಭಕ್ತ ಮೇಲು ಕೀಳೆನ್ನದೆ ದರ್ಪ ದುರಹಂಕಾರ ತೋರದೆ ದೇವಾಲಯದ ವ್ಯವಸ್ಥಾಪಕರು ನೀಡುವ ಪ್ರಸಾದವನ್ನು ಭಕ್ತಿಯಿಂದ ಸಂತೋಷದಿಂದ ಸ್ವೀಕರಿಸುವ ಪದ್ಧತಿ ನಮ್ಮ ಧರಿನಾಡಾದ ಬೀದರ ಜಿಲ್ಲೆಯ ಪ್ರತಿಯೊಂದು ದೇವರೋತ್ಸವಗಳಲ್ಲಿ ಎದ್ದು ಕಾಣುತ್ತದೆ.

ಉತ್ಸವಗಳಲ್ಲಿ ಹೆಣ್ಣು ಮಕ್ಕಳ ಉತ್ಸಾಹ ನೋಡುವಂತದ್ದು ಅವರಿಗೆ ಎಂದಿಲ್ಲದ ಸ್ವಾತಂತ್ರ್ಯ ಬೇಜಾರಿನ ಕೆಲಸಗಳನ್ನು ಮರೆತು ಸಂತೋಷ ಅನುಭವಿಸುವ ಹಕ್ಕನ್ನು ಪಡೆದಿರುತ್ತಾರೆ. ಕೂಡಿಟ್ಟ ಹುಂಡಿಯ ಹಣವನ್ನು ಮನರಂಜನೆಗೂ ಇಲ್ಲವೇ ತಮ್ಮ ಇಷ್ಟ ಬಂದ ಸಾಮಾಗ್ರಿ ಖರೀದಿಸುವುದಕ್ಕೂ ಖರ್ಚು ಮಾಡುತ್ತಾರೆ. ಅವರ ಈ ಉತ್ಸಾಹದಲ್ಲಿ ಇನ್ನೊಂದು ಮಾತೆಂದರೆ ತಮ್ಮ ತಮ್ಮ ಬಂಧು ಬಾಂಧವರಲ್ಲದೆ ಅಕ್ಕ-ಪಕ್ಕದ ಜನರು ಬಂದಿರುತ್ತಾರಲ್ಲ ಆಗ ತಮ್ಮ ಪರಿಚಯಸ್ಥರನ್ನು ಭೇಟಿ ಮಾಡಿ ತಮ್ಮ ಕಷ್ಟ ಸುಖ ದುಃಖಗಳನ್ನು ಹೇಳಿಕೊಳ್ಳುತ್ತಾರೆ. ಒಬ್ಬರನೊಬ್ಬರು ಕುಶಲೋಪಾಯ ವಿಚಾರಿಸುತ್ತಾರೆ.

ನಮ್ಮ ಬೀದರ ಜಿಲ್ಲೆಯ ಪ್ರಮುಖ ದೇವರೋತ್ಸವಗಳಾದ ಹುಮನಾಬಾದಿನ ವೀರಭದ್ರೇಶ್ವರ, ಪಾಪನಾಶಿ, ಇಟಗಿ ಭದ್ರೇಶ್ವರ, ಬೀದರಿನ ನರಸಿಂಹ ಝುರಣ, ಮುಲ್ತಾನಿಪಾಶ ಉರುಸ್, ಗುರುನಾನಕ ವಿಠಲನ ಉತ್ಸವ, ಹಾರಕೂಡ ಚನ್ನಬಸವೇಶ್ವರೋತ್ಸವ ಮುಂತಾದವು ಈ ದೇವರೋತ್ಸವ ನಡೆಯುವ ದಿನಗಳು ಶುಭದಿನವಾಗಿದ್ದು ಆ ದಿನ ಭಕ್ತರು ಹೊಸ ವ್ಯಾಪಾರ ಪ್ರಾರಂಭ ಮಾಡುವರು, ಜಾವಳ ಕತ್ತರಿಸುವುದು, ಲಗ್ನ ಮಾಡುವದು, ಗೃಹ ಪ್ರವೇಶ ಮಾಡುವ ಪದ್ಧತಿ ಇದೆ. ಹೀಗೆ ಮಾಡುವುದರಿಂದ ಮೇಲಿನವುಗಳಿಗೆ ಯಾವುದೇ ಶನಿ ಅಡ್ಡ ಬರುವುದಿಲ್ಲ. ಏನೇ ಆದರೂ ದೇವರು ನೋಡಿಕೊಳ್ಳುತ್ತಾರೆ ಎಂಬುದ ಜನರ ನಂಬಿಕೆಯಾಗಿದೆ ಉತ್ಸವದ ಕೊನೆಯ ದಿನಗಳಲ್ಲಿ ಕುಸ್ತಿ-ಸ್ಪರ್ಧೆ ನಡೆಯುತ್ತದೆ. ಆಯಾ ಉತ್ಸವದ ಸುತ್ತ-ಮುತ್ತಲಿನ ಜನರು, ಕಲಾವಿದರ ತಂಡಗಳು ಭಾಗವಹಿಸುತ್ತವೆ. ಕುಸ್ತಿ ಸ್ಪರ್ಧೆಯಲ್ಲಿ ಗೆದ್ದ ಪೈಲ್ವಾನನಿಗೆ ತಮ್ಮವರು ಹೆಗಲ ಮೇಲೆ ಕೂರಿಸುಕೊಂಡು ಕುಣಿಯುತ್ತಾರೆ. ಉತ್ಸವ ಏಕತೆ, ಶಾಂತತೆ ಮತ್ತು ದುರ್ಗುಣ ಅಳಿಸುವ ಆಚರಣೆಯಾಗಿದೆ. ದೇವರೋತ್ಸವ ಭಕ್ತಿ-ಭಾವಗಳೊಂದಿಗೆ ಮನರಂಜನೆಯ ಮಾಧ್ಯಮವು ಆಗಿದೆ.

### ದೇವರೋತ್ಸವಗಳ ಪ್ರಯೋಜನ :

ದೇವರೋತ್ಸವ ನಡೆಸುವುದರ ಮೂಲಕ ದೇವರಿಗೆ ಭಕ್ತಿ ಅರ್ಪಿಸುವರು, ದೇವರ ಕೃಪೆಗೆ ಪಾತ್ರರಾಗುತ್ತಾರೆ. ಎಂದು ನಂಬುತ್ತಾರೆ. ದೇವರೋತ್ಸವಗಳಿಂದ ಅನೇಕ ಉಪಯೋಗಗಳಿವೆ. ವಿವಿಧ ಕಡೆಗಳಿಂದ ಭಕ್ತರು ಉತ್ಸವಕ್ಕೆ ಬರುವುದುಂಟು ಬಂದವರು ಖಾಲಿ ಕೈಯಿಂದ ಮನೆಗೆ ಹೋಗುವವರು ಕಡಿಮೆ. ಸಾಧ್ಯವಾದಷ್ಟು ದೇವಾಲಯದ ಹುಂಡಿ ಪೆಟ್ಟಿಗೆಯಲ್ಲಿ ಕಾಣಿಕೆ ಹಾಕುತ್ತಾರೆ. ಒಂದೊಂದು ಸಲ ಈ ಕಾಣಿಕ ಹಣ ಲಕ್ಷ ರೂಪಾಯಿ ಮೀರುತ್ತದೆ. ಇನ್ನು ಉತ್ಸವಗಳಲ್ಲಿ ತಲೆಯೆತ್ತುವ ಅಂಗಡಿ ಮುಗ್ಗಟ್ಟುಗಳ ಮಾಲೀಕರು ಉತ್ಸವ ನಡೆಸುವ ಸಮಿತಿಯವರಿಗೆ ಬಾಡಿಗೆ ಹಣ ಸಂಗ್ರಹವಾಗುತ್ತದೆ. ಈ ಹಣವನ್ನು ಅನ್ನದಾಸೋಹ, ಜ್ಞಾನ ದಾಸೋಹ, ರಸ್ತೆ ಸುಧಾರಣೆ, ಉಚಿತ ಶಿಕ್ಷಣ, ಕಲ್ಯಾಣ ಕಾರ್ಯಕ್ರಮಗಳಿಗೆ ವಿನಿಯೋಗಿಸುತ್ತಾರೆ. ಕಲ್ಬುರ್ಗಿ ಶರಣ ಬಸವೇಶ್ವರ, ಖಾಜಾ ಬಂದೇನವಾಜ, ಬಸವಕಲ್ಯಾಣದ ಬಸವಣ್ಣ ಮುಂತಾದ ದೇವಾಲಯಗಳು ಮೇಲಿನಂತೆ ಕಾರ್ಯನಿರ್ವಹಿಸುತ್ತಿವೆ.

ದೇವರಿರುವ ಪವಿತ್ರ ಸ್ಥಳಕ್ಕೆ ನಾನಾ ಭಾಗದಿಂದ ಭಾವದಿಂದ ಬಂದ ಭಕ್ತ ವರ್ಗ ಸಾಮೂಹಿಕವಾಗಿ ಕುಳಿತು ದೇವತಾರಾಧನೆ ಮಾಡುವುದರೊಂದಿಗೆ ಭಜನೆ, ಕೀರ್ತನೆ, ಪ್ರವಚನ, ಉಪನ್ಯಾಸ ಮತ್ತು ರಥೋತ್ಸವ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಸಂತೋಷಪಡುತ್ತಾರೆ.

ಉತ್ಸವಗಳಲ್ಲಿ ಮೇಲು-ಕೀಳೆಂಬ ಭೇದವಿಲ್ಲದೆ ಜನರು ಸೇರುವುದರಿಂದ ವಿವಿಧ ಸಂಸ್ಕೃತಿಯ ಪರಿಚಯವೂ ಆಗುತ್ತದೆ. ಎಲ್ಲರೂ ಒಟ್ಟಾಗಿ ಕಲೆತು ಪರಸ್ಪರ ಸಂಬಂಧವನ್ನು ದೃಢಪಡಿಸಿಕೊಳ್ಳುವುದರ ಜೊತೆಗೆ ಹೊಂದಾಣಿಕೆಯನ್ನು ರೂಢಿಸಿಕೊಳ್ಳಲು ಉತ್ಸವಗಳು ನೆರವಾಗುತ್ತವೆ. ಆ ಐಕ್ಯತೆ ಭಾವನೆ ಭಾಗಶಃ ರಕ್ತ ಸಂಬಂಧದ ಭಾವನೆಯಿಂದ ಸಾಧಿತವಾದರೆ ಬಹುಭಾಗ ಸಮುದಾಯಿಕ ಆಸಕ್ತಿ ಮತ್ತು ಉತ್ಸವಗಳಿಂದ ಸಾಧ್ಯವಾಗುತ್ತದೆ.

ಪ್ರತಿಯೊಂದು ದೇವರೋತ್ಸವ ಆಯಾ ಧರ್ಮದ ಮತ-ತತ್ವಗಳ ಪ್ರಸಾರಕ್ಕೆ ಹೆಚ್ಚು ಮಹತ್ವ ಕೊಡುತ್ತದೆ. ಸಂಸ್ಕೃತಿ-ಸಾಹಿತ್ಯ ಮುಂತಾದ ವಿಷಯಗಳ ಕುರಿತು ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸುತ್ತಾರೆ. ಇದರಿಂದ ಜಾತ್ರೆಗೆ ಬಂದ ವಿವಿಧ ವರ್ಗದ ಜನರು ಬೇರೆ-ಬೇರೆ ಧರ್ಮಗಳ ವಿಷಯ ತಿಳಿದುಕೊಳ್ಳಲು ಅನುಕೂಲ ಮಾಡಿಕೊಡುತ್ತದೆ. ಇದರಿಂದ ಉತ್ಸವಕ್ಕೆ ಬಂದ ಭಕ್ತನ ಜ್ಞಾನದ ಪರಧಿ ಹೆಚ್ಚುತ್ತದೆ.

ಪ್ರತಿಯೊಂದು ಹೆಣ್ಣಿಗೆ ಚಿನ್ನದ ಮೇಲೆ ಅಪಾರ ವ್ಯಾಮೋಹವಿರುತ್ತದೆ. ಹಣದ ಅನುಕೂಲವಿರುವ ಹೆಣ್ಣುಮಕ್ಕಳು ಚಿನ್ನ ಖರೀದಿಸಿ ಬೇಕಾದ ಆಭರಣಗಳನ್ನು ಮಾಡಿಸಿಕೊಳ್ಳುತ್ತಾರೆ. ಬಡವರ್ಗದ ಸ್ತ್ರೀಯರು ಚಿನ್ನದ ಕನಸು ಕಾಣುವುದು ಸಹಜ. ಏಕೆಂದರೆ ಚಿನ್ನಕೊಳ್ಳುವಷ್ಟು ಹಣ ಅವರಲ್ಲಿರುವುದಿಲ್ಲ. ಹೀಗಾಗಿ ಉತ್ಸವದ ದಿನಗಳು ಎಣಿಸುತ್ತಿರುತ್ತಾರೆ. ಏಕೆಂದರೆ ಉತ್ಸವಗಳಲ್ಲಿ ಬಂಗಾರದ ನೀರು ಕುಡಿಸಿದ (ನಕಲಿ ಬಂಗಾರದ) ಆಭರಣಗಳ ಅಂಗಡಿಗಳಿರುತ್ತವೆ ಎಂಬ ಖಾತರಿ ಅವರಿಗೆ ಇರುತ್ತದೆ. ಹತ್ತು ಇಪ್ಪತ್ತು ರೂಪಾಯಿ ಕೊಟ್ಟು ಬೇಕಾದ ಒಡವೆ ಆಭರಣಗಳು ಕೊಳ್ಳಬಹುದಾಗಿದೆ. ಆದ್ದರಿಂದ ಬಡ ಹೆಣ್ಣು ಮಕ್ಕಳು ತಮಗೆ ಬೇಕಾದ ಒಡವೆಗಳನ್ನು ಸುಲಭ ಬೆಲೆಯಲ್ಲಿ ಖರೀದಿಸಬಹುದಾಗಿದೆ. ಒಡವೆಗಳು ಅಂದ ಕೂಡಲೇ ಒಂದೇ-ಎರಡೇ ಹತ್ತಾರು ಪ್ರಕಾರಗಳುಂಡು. ರುಳಿ, ಗೆಜ್ಜೆ, ನಾನ ಚೈನಾ, ಗುಂಡಾ, ಡಾಬ, ಕಾಲ್ಗಡಗ, ನತ್ತು, ಸುಪಾನಿ, ಸರಗಿ, ಕಡಗ, ಒಡ್ಯಾಣ, ಲಾಕೀಟು, ಉಂಗುರು, ಕಾಲುಂಗರ, ಝುಮಕಿ ಮುಂತಾದವುಗಳು ಹೆಸರಿಸಬಹುದು.

ಉತ್ಸವದಲ್ಲಿ ಎಂದೂ ಕೇಳದ, ಕೇಳಿದರೂ ನೋಡದ ಮನರಂಜನೆ ಮಾಧ್ಯಮಗಳಿರುತ್ತವೆ. ವಿವಿಧ ಆಟಿಕೆ ಸಾಮಾನುಗಳು, ಕುಣಿತಗಳು, ಮೇಳಗಳು ಮುಂತಾದವುಗಳು, ಕಿವಿ-ಕಣ್ಣು-ಮನಸ್ಸಿಗೆ ಸಮಾರಾಧನೆ ನೀಡುತ್ತವೆ. ಇವು ಒಂದು ಕಡೆಯಾದರೆ ದೇವಾಲಯದ ಹೊರಗಿರುವ ಅಂಗಡಿಗಳು ವಿವಿಧ ಬಗೆಯ ಖಾದ್ಯಗಳನ್ನು ತಯಾರಿಸಿ ಭಾವುಕರ ನಾಲಿಗೆಯಲ್ಲಿ ನೀರೂರುವಂತೆ ಮಾಡುತ್ತವೆ. ಹೀಗಾಗುವುದರಿಂದ ಜಾತ್ರೆಗೆ ಬಂದ ಭಕ್ತರು ಖಾದ್ಯಗಳನ್ನು ಖರೀದಿಸಿ ತಿಂದೆ ಬಿಡುವರು. ಇದರಿಂದ ಖಾದ್ಯ ವಸ್ತುಗಳ ಮಾಲೀಕನಿಗೆ ಹೆಚ್ಚಿನ ಲಾಭ ಬರುತ್ತದೆ. ಉತ್ಸವಗಳು ಕೇವಲ ಜನ ಜಂಗುಳಿಯ

ಉತ್ಸಾಹ, ಮೋಜು, ಗದ್ದಲಗಳ ಸ್ಥಳವನ್ನಾಗಿ ಉಳಿಯಗೊಡದೆ ಅವುಗಳಿಗೆ ಒಂದು ಸಾಂಸ್ಕೃತಿಕ ಹಿರಿಮೆಯನ್ನು ತಂದುಕೊಡುವ ಶ್ರೇಯಸ್ಸು, ಪ್ರತಿಯೊಂದು, ಉತ್ಸವದಲ್ಲಿ ಎದ್ದು ಕಾಣುತ್ತದೆ. ಭಜನೆ, ಕೀರ್ತನೆ, ಉಪನ್ಯಾಸ, ಸಾಹಿತ್ಯ, ಸಂಗೀತ, ನೃತ್ಯಗೋಷ್ಠಿಗಳು, ಬಯಲಾಟ, ಲಾವಣಿ, ಕುಸ್ತಿ ಕರಕುಶಲ ವಸ್ತು ಪ್ರದರ್ಶನಗಳು ಹೆಸರಿಸಬಹುದು.

ಸಮಷ್ಠಿಯ ಸಂಪತ್ತು ಉತ್ಸವ ಎಲ್ಲರ ಕ್ಷೇಮಾಭಿವೃದ್ಧಿಗಾಗಿ ಒಂದು ನಿಗದಿತ ಸಮಯದಲ್ಲಿ ದೇವರುಗಳ ಹೆಸರಿನಲ್ಲಿ ಧಾರ್ಮಿಕ ಕ್ಷೇತ್ರವೊಂದರಲ್ಲಿ ಸಾಮೂಹಿಕವಾಗಿ ಆಚರಿಸುವ ಧಾರ್ಮಿಕ ವಿಧಿಯಾಗಿ ಇಂದು ರೂಢಿಯಲ್ಲಿದೆ. ಇದು ಹತ್ತಾರು ರೂಢಿ ಸಂಪ್ರದಾಯಗಳನ್ನು, ಅನೇಕ ಜಾನಪದ ಅಂಶಗಳನ್ನು ತನ್ನಲ್ಲಿ ಇಟ್ಟುಕೊಂಡು ಒಂದು ಸಂಕೀರ್ಣ ವ್ಯವಸ್ಥೆಯಾಗಿದೆ. ಹಳ್ಳಿ–ಪಟ್ಟಣದವರಿಗೆ ದೇವರೋತ್ಸವವೊಂದು, ಪುಣ್ಯ ಪ್ರಸಂಗವಾಗಿದೆ. ಎಲ್ಲರೊಂದಿಗೆ ಕೂಡಿ ಆನಂದ ಪಡುವ ಹಬ್ಬವಾಗಿದೆ. ಉತ್ಸವದ ಮೂಲೋದ್ದೇಶ ಸಾಮಾಜಿಕ ಜನ ಜೀವನದ ವ್ಯವಸ್ಥೆ ಸುರಕ್ಷಿತವಾಗಿ ಮುನ್ನಡೆಸಲು ಮತ್ತು ತಲಮಾರಿನಿಂದ–ತಲೆಮಾರಿಗೆ ಸಾಗಿ ಬಂದ ಸಂಸ್ಕೃತಿಯ ಪ್ರವಾಹವನ್ನು ಮುಂದುವರಿಸುವುದೇ ಆಗಿದೆ.

ದೇವರೋತ್ಸದಿಂದ ಪ್ರತಿಯೊಬ್ಬನ ಮನಸ್ಸು ಧಾರ್ಮಿಕತೆಯಲ್ಲಿ ಮಿಂದು ಲೌಕಿಕ ಸುಖ ಸಂತೋಷಪಡುವುದುಂಟು ನಿರಂತರ ದುಡಿಮೆಯ ದವಡೆಯಿಂದ ಅಲ್ಪವಿರಾಮ ಪಡೆಯುತ್ತದೆ. ಗೊಂದಲದ ಬದುಕಿನಿಂದ ಕ್ಷಣಕಾಲ ತಪ್ಪಿಸಿಕೊಂಡು ಲೌಕಿಕ ಪರಮಾರ್ಥಿಕಗಳೆರಡರ ಸವಿ ಸುಖ ದರ್ಶನ ಪಡೆಯಲು ಅನುಕೂಲವಾಗುತ್ತದೆ. ಆದ್ದರಿಂದ ಪ್ರತಿಯೊಬ್ಬನ ಮನಸ್ಸು ಹಸನಾಗಿ, ಅವನಲ್ಲಿ ವಿವೇಕ ಹುಟ್ಟಿ ಬದುಕು ಸಾರ್ಥಕಪಡಿಸಿಕೊಳ್ಳುತ್ತಾನೆ.

ಉತ್ಸವ ದೇವ–ದೇವತೆಗಳ ಸಂಪ್ರೀತಿಗಾಗಿಯೋ, ಹಾರೈಕೆಗಾಗಿಯೋ, ಮಹಾತ್ಮರ ಗೌರವಾರ್ಥವಾಗಿಯೋ, ಸಮಾಜ ಸುಧಾರಣೆಗಾಗಿಯೋ ಜರುಗಿ ಆ ನೆಪದಲ್ಲಿ ಧಾರ್ಮಿಕ ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ, ತಾತ್ವಿಕ ಮತ್ತು ರಾಜಕೀಯ ಸಂಘಟನೆ ಹೆಚ್ಚಿಸಿ, ವ್ಯಷ್ಟಿ ಹಾಗೂ ಸಮಷ್ಠಿ ಹಿತಗಳನ್ನು ಏಕ ಕಾಲದಲ್ಲಿ ಸಾಧಿಸುತ್ತದೆ.

# ಅಧ್ಯಾಯ : ಮೂರು

## ದೇವರೋತ್ಸವಗಳ ವರ್ಗೀಕರಣ ಹಾಗೂ ಪ್ರಮುಖ ದೇವರೋತ್ಸವಗಳು

೩ : ೧) ಐತಿಹಾಸಿಕ ದೇವರೋತ್ಸವಗಳು

೩ : ೨) ಪೌರಾಣಿಕ ದೇವರೋತ್ಸವಗಳು

ಅಧ್ಯಾಯ : ೩ : ದೇವರೋತ್ಸವಗಳ ವರ್ಗೀಕರಣ :

ಆದಿಮಾನವ ಮಾತ್ರವಲ್ಲ ಎಲ್ಲ ಕಾಲದ ಸಾಮಾನ್ಯ ಜನರ ಕಲ್ಪನೆಗಳು, ನಂಬಿಕೆಗಳು, ಹಬ್ಬ-ಹರಿದಿನಗಳು ಸಾಂಸ್ಕೃತಿಕ ಚಟುವಟಿಕೆಗಳು, ಕಷ್ಟ ದುಃಖ, ಮನರಂಜನೆ, ಹತ್ತು ಹಲವಾರು ಆಶೋತ್ತರಗಳು ಅವರಲ್ಲಿ ಸೇರಿ ಕೊಂಡಿವೆ. ಹೀಗೆ ಬದುಕಿನ ಎಲ್ಲವನ್ನು ಒಳಗೊಂಡ ಬಹು ವಿಸ್ತಾರವಾದ ದೇವರೋತ್ಸವಗಳ ವಿಂಗಡಣೆ ಕಠಿಣವಾದ ವಿಷಯ. ದಂತಕಥೆ, ಪುರಾಣ ಇತಿಹಾಸದಲ್ಲಿ ಹೆಸರು ಹೊಂದಿರುವ ದೇವ ದೇವತೆಗಳಿವೆ. ನಿಜಕ್ಕೂ ಅದು ಇತಿಹಾಸ ಪೂರ್ವಯುಗದ ಹಾಗೂ ಸರ್ವಕಾಲಿಕ ಶ್ರೀ ಸಾಮಾನ್ಯರನ್ನು ಒಳಗೊಂಡಿದೆ. ದೇವರು ಜನ-ದನ, ಗೀತೆ, ನೃತ್ಯ, ಸಂಗೀತ, ಕಲೆ ಮೊದಲಾದವುಗಳನ್ನು ಒಳಗೊಳ್ಳುವ ಉತ್ಸವ ಬಹು ಸಂಕೀರ್ಣವೂ ಅಪಾರ ವೈವಿಧ್ಯಮಯವೂ ಎನಿಸಿದೆ. ಉತ್ಸವ ಯಾವ ಆಧಾರದ ಮೇಲೆ ವಿಂಗಡಿಸಿದರೂ ಅಸಮರ್ಪಕತೆಯ ದೋಷವನ್ನು ಪರಿಹರಿಸುವುದು ಅಸಾಧ್ಯವಾದ ಮಾತೇ ಸರಿ. ಆದರೂ ಅಧ್ಯಯನ ಅನುಕೂಲತೆಗಾಗಿ ಜಾನಪದ ವಿದ್ವಾಂಸರು ದೇವರೋತ್ಸವಗಳನ್ನು ಕೆಳಗಿನಂತೆ ವರ್ಗೀಕರಣ ಮಾಡಿದ್ದಾರೆ.

ಉತ್ತರ ಕರ್ನಾಟಕದಲ್ಲಿ 'ಗುಡಿ ಉತ್ಸವಗಳು' ಮತ್ತು 'ಮಠದ ಉತ್ಸವಗಳು' ಎಂಬ ಎರಡು ವಿಭಾಗಗಳನ್ನು ಡಾ: ಎಂ.ಎಸ್. ಲಠ್ಠೆಯವರು ಮಾಡಿದ್ದರೆ ತುಳುನಾಡಿನಲ್ಲಿ ಭೂತಗಳ ಉತ್ಸವ, ಮಾರಿ ಉತ್ಸವ ಕೋಟಿ ಚನ್ನಯ್ಯ, ಬೈದ್ಯಕನಳ ಉತ್ಸವ, ನಾಗಮಂಡಲ ದೇವರೋತ್ಸವಗಳೆಂಬ ಪ್ರಭೇದಗಳನ್ನು ಕೆ. ಚನ್ನಪ್ಪ ಗೌಡರು (೧೯೮೮ : ೨೯-೩೦) ಕಲ್ಪಿಸಿದ್ದಾರೆ. ಗುಡಿ ದೇವರೋತ್ಸವಗಳಲ್ಲಿ ಸವದತ್ತಿ, ಚಿಂಚನಸೂರು, ನೀರಮಾನ್ವಿಗಳ ಎಲ್ಲಮ್ಮ, ಸಿಂಧನೂರು, ಉಡಚಣ, ಖಾನಪುರಗಳ ಅಂಬಾ, ಮುಂತಾದ ದೇವತೆಗಳು, ಮಠದ ಉತ್ಸವಗಳಲ್ಲಿ ಕೊಪ್ಪಳ ಗವಿಸಿದ್ದೇಶ್ವರ, ಕಲ್ಬುರ್ಗಿ ಶರಣಬಸವೇಶ್ವರ, ಬಸವಕಲ್ಯಾಣ ಬಸವಣ್ಣ ಪ್ರಭುದೇವ, ಮೊದಲಾದ ದೇವರುಗಳನ್ನು ಲಠ್ಠೆಯವರು ಹೆಸರಿಸಿದ್ದಾರೆ. ಭೂತಾರಾಧನೆಯಲ್ಲಿ ಪುರಾಣ ಸಂಬಂಧ ಭೂತಗಳ ಉತ್ಸವ (ಶೈವ, ವೈಷ್ಣವ, ಶಾಕ್ತ) ಚಾರಿತ್ರಿಕ, ಐತಿಹಾಸಿಕ, ಆಧಾರಗಳಿರುವ ವೀರಗಾರರ ಉತ್ಸವ, ಕುಲಲಾಂಛನದ ಸಂಕೇತ ಪ್ರಾಣ ಸಂಬಂಧ ಹೊಂದಿರುವ ದೇವರೋತ್ಸವಗಳು ಎಂದು ಪ್ರಸ್ತಾಪ ಮಾಡುತ್ತಾರೆ ಕೊನೆಗೆ ಉತ್ಸವದಲ್ಲಿ ಎರಡು ಬಗೆ ೧) ಆಗಮ ರೀತಿ (ವೈದಿಕ ಶಿಷ್ಟ) ಪದ್ಧತಿಯ ದೇವರೋತ್ಸವಗಳು ೨) ಜಾನಪದ ಶೈಲಿಯ ದೇವರೋತ್ಸವಗಳು ಎಂದು ವಿಂಗಡಿಸಿ ಆಗಮ ರೀತಿಯ ದೇವರೋತ್ಸವಗಳಲ್ಲಿ ಪೌರಾಣಿಕ ದೇವರು-ದೇವತೆಗಳ ಅರಾಧನೆ ನಡೆಯುತ್ತದೆ. ಮಾರಿ ಸಿರಿ ಉತ್ಸವಗಳು ಜಾನಪದ ಶೈಲಿಯ ಮಾದರಿಯಲ್ಲಿರುತ್ತವೆಂದು ಚಿನ್ನಪ್ಪ ಗೌಡರು ಅಭಿಪ್ರಾಯ ಪಡುತ್ತಾರೆ. ಈ ಒಂದೊಂದು ವಿಭಾಗವೂ ಒಂದೊಂದು ಪ್ರತ್ಯೇಕ ದೇವರೋತ್ಸವದ ಪ್ರಕಾರವಾಗಿದೆ ಎಂಬುದು ಗಮನಾರ್ಹವಾದ ವಿಷಯ.

ವೈದಿಕರ ರಾಮ, ಕೃಷ್ಣ, ನಾರಾಯಣ, ವಿಶ್ವಕರ್ಮದವರ ಕಾಳಿಕಾದೇವಿ, ಲಿಂಗಾಯತರ ಈಶ್ವರ, ಕುರುಬರ ಬೀರದೇವರು, ಮುಸಲ್ಮಾನರ ಉರುಸು, ಹರಿಜನರ ದುರಗವ್ವ, ಇತ್ಯಾದಿ

ದೇವರೋತ್ಸವ ಜಾತಿ ಇಲ್ಲವೇ ಮತ ಸೂಕ ಉತ್ಸವಗಳೆಂದು, ಹನುಮಂತ ಶಿಶುನಾಳ ಷರೀಫ, ಶಿರಹಟ್ಟಿ ಫಕೀರಸ್ವಾಮಿ, ಇತ್ಯಾದಿ ಉತ್ಸವಗಳನ್ನು ಲೌಕಿಕ ದೇವರೋತ್ಸವಳೆಂದು ಕರೆಯುವುದುಂಟು. ಸವದತ್ತಿ ಎಲ್ಲಮ್ಮ, ಬಾದಾಮಿಯ ಬನಶಂಕರಿ, ಚಿಂಚಲಿ ಮಾಯವ್ವ, ಬೂದನಗುಡ್ಡ ಬಸವಣ್ಣ, ಉಳವಿಯ ಚನ್ನಬಸವಣ್ಣ, ಗದುಗಿನ ಮಡಿವಾಳೇಶ್ವರ, ವರವಿಯ ಮೌನೇಶ್ವರ ಮುಂತಾದ ಉತ್ಸವಗಳನ್ನು ಸ್ಥಳವಾಚಕ ದೇವರೋತ್ಸವಗಳೆಂದು ವಿಂಗಡಿಸಿದ್ದಾರೆ. ಈ ವರ್ಗೀಕರಣ ಕ್ರಮಬದ್ಧತೆಯ ದೃಷ್ಠಿಯಿಂದ ಉತ್ಸವಗಳ ಪ್ರಕಾರ ಅಷ್ಟೇನೂ ಮುಖ್ಯವಲ್ಲವಾದರೂ ವಿಷಯ ವ್ಯಾಪ್ತಿಯ ದೃಷ್ಟಿಯಿಂದ ಇಂತಹದೊಂದು ವಿಂಗಡನೆ ಆಳವಾದ ಅನುಭವ ಅಧ್ಯಯನಕ್ಕೆ ಸಾಕ್ಷಿಯಾಗಿದೆ ಎನ್ನಬಹುದು.

ದೇಶೀಯ ಮತ್ತು ವಿದೇಶಿಯ ವಿದ್ವಾಂಸರು ಜಾನಪದ ವಿಂಗಡನೆಯ ಪ್ರಯತ್ನಕ್ಕೆ ಕೈ ಹಾಕಿದ್ದಾರೆ. ಆದರೆ ದೇವರೋತ್ಸವದ ಪ್ರಸ್ತಾಪ ಮತ್ತು ವಿಂಗಡನೆ ಮಾಡಿರುವುದಿಲ್ಲ. ಉತ್ಸವದ ವರ್ಗೀಕರಣಕ್ಕೆ ಸಂಬಂಧಿಸಿದ ನೂರಾರು ಜಾನಪದ ಗ್ರಂಥಗಳು ತಿರುವಿದರೂ ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ನಾಲ್ಕಾರು ವಿದ್ವಾಂಸರು ವಿಂಗಡನೆ ಮಾಡಿದ ಉಲ್ಲೇಖಗಳು ಮಾತ್ರ ಸಿಗುತ್ತವೆ. ಹೀಗಾಗಿ ದೇವರೋತ್ಸವಗಳ ವರ್ಗೀಕರಣದ ಬಗ್ಗೆ ಆಳವಾದ ಅಧ್ಯಯನ ನಡೆಸಲಾಗುತ್ತದೆ. ನನ್ನ ಕ್ಷೇತ್ರಕಾರ್ಯ ಮತ್ತು ಅಧ್ಯಯನದಿಂದಾಗಿ ಲಿಂಗ ಆಧರಿಸಿ ಗಂಡು ಮತ್ತು ಹೆಣ್ಣು ದೇವತೆಗಳ ಉತ್ಸವಗಳೆಂದು ಎರಡು ಪ್ರಕಾರ ಮಾಡಬಹುದು. ಜಾತಿ ಮತ ಗಣನೆಗೆ ತೆಗೆದುಕೊಂಡು ಹಿಂದುಗಳ ದೇವರೋತ್ಸವ ಕ್ರೈಸ್ತರ ದೇವರೋತ್ಸವಗಳು ಸಿಖ್ಖರ ದೇವರೋತ್ಸವಗಳೆಂದು ವಿಂಗಡಿಸಬಹುದು. ಭೌಗೋಳಿಕ ಹಿನ್ನಲೆಯಾಗಿ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ಉತ್ಸವಗಳನ್ನು ಗ್ರಾಮದೇವರ ಉತ್ಸವಗಳೆಂದು, ನಗರ ಕೇಂದ್ರಗಳಲ್ಲಿ ಜರಗುವ ಉತ್ಸವಗಳನ್ನು ಗ್ರಾಮ್ಯ ದೇವರ ಉತ್ಸವಗಳೆಂದು ಕರೆಯಬಹುದು. ದೇವರೋತ್ಸವ ಜರುಗುವಾಗ ಆರ್ಥಿಕ ಮಟ್ಟವನ್ನು ದೃಷ್ಠಿಯಲ್ಲಿಟ್ಟುಕೊಂಡು ಸಣ್ಣ ಪ್ರಮಾಣದಲ್ಲಿ ಆಚರಣೆ ಮಾಡುವ ಉತ್ಸವಕ್ಕೆ ಸಣ್ಣ ಉತ್ಸವ ಅದ್ದೂರಿಯಾಗಿ ಆಚರಿಸಲ್ಪಡುವ ದೇವ–ದೇವತೆಯ ಉತ್ಸವಕ್ಕೆ ದೊಡ್ಡ ಉತ್ಸವವೆಂದು ಪರಿಗಣಿಸಬಹುದು. ಆದರೆ ಈ ಪ್ರಕಾರಗಳು ಒಂದರಲ್ಲಿ ಒಂದು ಹೆಣೆದುಕೊಳ್ಳುತ್ತವೆ. ಅವು ಪರಿಪೂರ್ಣ ಎನಿಸುವುದಿಲ್ಲ. ಹೀಗಾಗಿ ದೇವರೋತ್ಸವವನ್ನು ಎಷ್ಟೋ ವಿಭಾಗಗಳಾಗಿಯಾದರೂ ವರ್ಗೀಕರಣ ಮಾಡಿಕೊಳ್ಳುವ ಸಾಧ್ಯತೆಗಳಿವೆ. ಈ ಮೇಲಿನ ಎಲ್ಲ ಪ್ರಕಾರಗಳನ್ನು ದೃಷ್ಠಿಯಲ್ಲಿಟ್ಟುಕೊಂಡು ಅಧ್ಯಯನದ ಅನುಕೂಲತೆಯ ದೃಷ್ಠಿಯಿಂದ ಉತ್ಸವಗಳನ್ನು ಸ್ಥೂಲವಾಗಿ ಎರಡು ಪ್ರಕಾರಗಳನ್ನಾಗಿ ವರ್ಗೀಕರಿಸಿಕೊಳ್ಳಬಹುದು.

i) ಒಂದು ಐತಿಹಾಸಿಕ ದೇವರೋತ್ಸವಗಳು

ii) ಇನ್ನೊಂದು ಪೌರಾಣಿಕ ದೇವರೋತ್ಸವಗಳು

೩ : ೧)    ಐತಿಹಾಸಿಕ ದೇವರೋತ್ಸವಗಳು :

ಇತಿಹಾಸಕ್ಕೆ ಸಂಬಂಧಿಸಿದ ದೇವ-ದೇವತೆಗಳ ಉತ್ಸವಗಳೇ ಐತಿಹಸಿಕ ದೇವರೋತ್ಸವಗಳು, ಸಮಾಜದಲ್ಲಿ ಹುಟ್ಟಿ-ಬೆಳೆದು ನಾಸ್ತಿಕನಾಗದೆ ಆಸ್ತಿಕನಾಗಿ ಶಿವಯೋಗಿಯಾಗಿ ಶಿವನ ಸನ್ನಧಿ ಸೇರಿದ ಮಹಾತ್ಮರ ಸಾಧು-ಸಂತರ ಸ್ಮರಣಾರ್ಥ ಸಾಮೂಹಿಕವಾಗಿ ಆಚರಣೆ ಮಾಡುವ ಪುಣ್ಯತಿಥಿಯೇ "ಐತಿಹಾಸಿಕ ದೇವರೋತ್ಸವಗಳು" ಈ ಉತ್ಸವಗಳು ವರ್ಷ ಇಲ್ಲವೆ ಎರಡು ಮೂರು ವರ್ಷಕ್ಕೊಮ್ಮೆ ಜರುಗುತ್ತವೆ.

ಉತ್ಸವಗಳು ಜರುಗುವಾಗ ಮಠ-ಮಸೀದಿಗಳಿಗೆ ಸುಣ್ಣ ಬಣ್ಣ ಬಳಿದು ಅಲಂಕರಿಸುತ್ತಾರೆ. ಉತ್ಸವದಂದು ಧ್ವನಿವರ್ಧಕಗಳು ಅಳವಡಿಸುತ್ತಾರೆ. ಆ ದಿನ ಸುತ್ತ-ಮುತ್ತಲಿನ ಭಕ್ತರು ಉತ್ಸವದಲ್ಲಿ ಪಾಲ್ಗೊಂಡು ದರ್ಶನ ಪಡೆದು ಊಟ ಮಾಡುವರು. ಮಧ್ಯಾನ್ಹದ ವೇಳೆಗೆ ಪಲ್ಲಕ್ಕಿಯಲ್ಲಿ ಮಹಾನುಭಾವನ ಮೂರ್ತಿ ಇಟ್ಟು ಮೆರವಣಿಗೆ ಮಾಡುವರು. ಮೆರವಣಿಗೆಯಲ್ಲಿ ಪುರವಂತಿಕೆ, ಹಲಗೆ, ಡೊಳ್ಳು ಮುಂತಾದ ಮೇಳಗಳಿರುತ್ತವೆ. ಕುಣಿದು ಕುಪ್ಪಳಿಸಿದಂತೆ ಪಲ್ಲಕ್ಕಿ ಮುಂದೆ ಮುಂದೆ ಸಾಗುತ್ತದೆ. ಜಯ ಘೋಷಣೆಗಳು ಮೊಳಗುತ್ತಿರುತ್ತವೆ. ಕೊನೆಗೆ ಪಲ್ಲಕ್ಕಿ ಸಂಜೆ ಹೊತ್ತಿಗೆ ಸ್ವಸ್ಥಳಗಳನ್ನು ತಲುಪುವುದು. ಸಂಜೆಗೆ ಪುರಾಣ ಪ್ರವಚಣ ಭಜನೆ-ಕೀರ್ತನೆ, ವಚನಗಾಯನ ಮುಂತಾದ ಕಾರ್ಯಕ್ರಮಗಳು ನಡೆಯುತ್ತವೆ.

ನಮ್ಮ ಬೀದರ ಜಿಲ್ಲೆಯಲ್ಲಿ ಗುರುನಾನಕರ ಉತ್ಸವ, ಬಸವಣ್ಣನವರ ಉತ್ಸವ, ಮಾಣಿಕ ಪ್ರಭುಗಳ ಉತ್ಸವ ಮುಂತಾದ ಪ್ರಸಿದ್ಧ ಐತಿಹಾಸಿಕ ದೇವರೋತ್ಸವಗಳೆನಿಸಿವೆ. ಈ ಉತ್ಸವಗಳಲ್ಲಿ ಯಾವುದೇ ಅಹಿತಕರ ಘಟನೆಗಳು ಹೆಚ್ಚಾಗಿ ಜರುಗುವುದಿಲ್ಲ. ಉತ್ಸವಗಳು ನಡೆಯುವಾಗ ಜಾತಿ ವರ್ಗದ ಸಂಘರ್ಷಗಳು ಮಾಯವಾಗಿ ಎಲ್ಲರೂ ಒಂದೇ ಎನ್ನುವಂತೆ ಎಲ್ಲ ವರ್ಗದ ಜನರು ಯಶಸ್ವಿಗಾಗಿ ಸಹಕರಿಸುತ್ತಾರೆ. ಮತ್ತು ಭಾಗವಹಿಸುತ್ತಾರೆ. ಐತಿಹಾಸಿಕ ದೇವರೋತ್ಸವಗಳಿಗೆ ತನ್ನದೇ ಆದ ಕೆಲವು ಸರಳ ಆಚರಣೆಗಳಿರುತ್ತವೆ. ಪದ್ಧತಿ ರೀತಿಗಳಿರುತ್ತವೆ. ಪೂಜೆ, ಪುನಸ್ಕಾರ, ಪಲ್ಲಕ್ಕಿ, ರಥೋತ್ಸವ ಇತ್ಯಾದಿಗಳು ತನ್ನ ಚೌಕಟ್ಟಿನಲ್ಲಿಯೇ ನಡೆಯುತ್ತವೆ. ಶಾಂತ ರೀತಿಯಿಂದ ಈ ಉತ್ಸವಗಳು ಜರುಗಿ ಜನ ಸಾಮಾನ್ಯರಿಗೆ ಶಾಂತಿಯನ್ನು ಕಲ್ಪಿಸಿಕೊಡುತ್ತವೆ.

೩ : ೨ )    ಪೌರಾಣಿಕ ದೇವರೋತ್ಸವಗಳು :

ಪುರಾಣಗಳು ಭಾರತೀಯ ಪವಿತ್ರ ಗ್ರಂಥಗಳು. ಧಾರ್ಮಿಕ ಗ್ರಂಥಗಳಲ್ಲಿ ವೇದಗಳ ಅನಂತರ ಅವುಗಳಿಗೆ ಹೆಚ್ಚಿನ ಪ್ರಾಧಾನ್ಯವಿದೆ. ಇದನ್ನು ಹಿಂದೂಧರ್ಮ ಮತ್ತು ಸಂಸ್ಕೃತಿಯ ವಿಶ್ವಕೋಶ ಎನ್ನಬಹುದು. ಇಂತಹ ಪುರಾಣ ಇಲ್ಲವೆ ದಂತ ಕಥೆಗಳಲ್ಲಿ ಬರುವ ದೇವ

ದೇವತೆಗಳ ಉತ್ಸವವೇ ಪೌರಾಣಿಕ ದೇವರೋತ್ಸವಗಳು ಎನ್ನಬಹುದು. ವೇದಗಳಲ್ಲಿ ಪ್ರತಿಪಾದಿತವಾಗಿರುವ ಹಲವಾರು ಅಂಶಗಳನ್ನು ಕಥೆಯ ಚೌಕಟ್ಟಿನಲ್ಲಿ ವಿವರಿಸುವುದು ಪುರಾಣಗಳ ವಿಶಿಷ್ಟ ಲಕ್ಷಣ. ದೇವತೆಗಳು ಪ್ರಾಚೀನ ಕಾಲದಲ್ಲಿ ನಿಜವಾಗಿಯೂ ಇದ್ದವೆಂದು ನಮ್ಮ ದಂತ ಕಥೆಗಳು ಮತ್ತು ಪುರಾಣಗಳು ಹೇಳುತ್ತವೆ. ಆದರೆ ಈ ಕುರಿತು ಯಾವುದೇ ನಿಖರವಾದ ದಾಖಲೇ ಅಥವಾ ಪುರಾವೆಗಳು ಸಿಗುವುದಿಲ್ಲ.

ಪುರಾಣಗಳಿಗೆ ಸಾಮಾನ್ಯವಾಗಿ ಧಾರ್ಮಿಕ ಹಿನ್ನಲೆ ಇದ್ದೇ ಇರುತ್ತದೆ. ಅದರ ಮುಖ್ಯ ಪಾತ್ರ ದೇವ ದೇವತೆಗಳಾಗಿರುತ್ತಾರೆ. ಕಥೆಗಳು ಮತ್ತು ಪುರಾಣಗಳಿಗೆ ಹುಟ್ಟು ಹಾಕಿದವರು ಋಷಿಗಳು ಎನ್ನುವ ತಿಳುವಳಿಕೆ ಇದೆ. "ಪುರಾಣ ಮತ್ತು ದಂತ ಕಥೆಗಳಲ್ಲಿ" ಮಾರಮ್ಮ, ಚೌಡಮ್ಮ, ಹುಲಿಗೆಮ್ಮ, ಕರೆಮ್ಮ, ಪೋಚಮ್ಮ, ಎಲ್ಲಮ್ಮ ಮುಂತಾದ ದೇವ ದೇವತೆಗಳ ಪ್ರಸ್ತಾಪ ಬರುತ್ತದೆ.

ಬೀದರ ಜಿಲ್ಲೆಯ ಪ್ರತಿಯೊಂದು ಹಳ್ಳಿ ಹಳ್ಳಿಗಳಲ್ಲಿ ದೇವತೆಗಳು ಕಂಡುಬರುತ್ತವೆ. ಇವುಗಳಲ್ಲಿ ಹೆಣ್ಣು ದೇವತೆಗಳೇ ಹೆಚ್ಚು. ಹೆಣ್ಣು ಸೃಷ್ಠಿಗೆ ಕಾರಣಗಳು, ಸೌಮ್ಯ ರೂಪದವಳೂ ಹೌದು, ಉಗ್ರ ರೂಪದವಳು ಹೌದು. ಹೀಗಾಗಿ ತಾಯಿಯೇ ಪ್ರಧಾನವಾಗಿ ಇದ್ದ ನಮ್ಮ ಸಮಾಜದಲ್ಲಿ ಹೆಣ್ಣು ದೇವತೆಗಳ ಉಗಮ ಹೆಚ್ಚಾಗಿ ಆಗಿರಬೇಕೆನಿಸುತ್ತದೆ. ಈ ದೇವತೆಗಳು ಗ್ರಾಮದ ಸಂರಕ್ಷಣೆ ಮಾಡುತ್ತವೆಂಬ ಕಾರಣದಿಂದ 'ಗ್ರಾಮ ದೇವತೆಗಳೆಂದು' ಕರೆಯುತ್ತಾರೆ. ಇವು ಉಗ್ರರೂಪಿ ಎಂಬ ಅರ್ಥವೂ ಇದೆ. ಅನೇಕ ದಂತ ಕಥೆಗಳಿವೆ. ಒಟ್ಟಿನಲ್ಲಿ ಗ್ರಾಮದೇವತೆಗಳು ದುಷ್ಟರನ್ನು ಶಿಕ್ಷಿಸುವ, ಮೊರೆ ಬಿದ್ದವರನ್ನು ಕಾಪಾಡುವ ದೇವತೆ ಎಂದು ಜನ ನಂಬಿಕೊಂಡು ಬಂದಿದ್ದಾರೆ. ಉರುಳ ಸೇವೆ, ಕೊಂಡ ಹಾಯುವುದು, ಬೇವಿನುಡಿಗೆ, ಬಲಿಸಂಪ್ರದಾಯ ಮುಂತಾದ ಅನಿಷ್ಟ ಪದ್ಧತಿಗಳು ಈ ಜಾತ್ರೆಯಲ್ಲಿರುತ್ತವೆ.

ಜನಪದರು ಪ್ರಕೃತಿಯ ನಡುವೆ ಬದುಕು ಕಟ್ಟಿಕೊಂಡು ನಿಸರ್ಗವೆ ದೇವ ಸ್ವರೂಪವೆಂದು ತಿಳಿದು

'ಹೂವಿನಾಗ ಹುದುಗ್ಯಾನ ಮಾಲ್ಯಾಗ ಮಲಗ್ಯಾನ
ಮೊಗ್ಗಾಗಿ ಕಣ್ಣ ತೆರವಾನ : ಲಿಂಗಯ್ಯನ
ನೋಡಲಿಕ್ಕೆ ನಿದ್ದೆ ಬಯಲಾಗಿ'

ಎಂದು ಜನಪದರು ಹಾಡಿ ಹೊಗಳಿದ್ದಾರೆ. ಹೀಗೆ ದೇವರುಗಳ ಕಲ್ಪನೆಯನ್ನು ಜೀವನದ ನಡುವೆ ಇಟ್ಟು ಕೊಂಡಿದ್ದಾರೆ.

ಜೀವನ ಸುಖದ ಸುಪ್ಪತ್ತಿಗೆ ಅಲ್ಲ. ಕಷ್ಟ ನಷ್ಟ, ನೋವು ನರಳಿಕೆಗಳ ಹೋರಾಟ ಅದು. ದುಃಖದ ಹೊಡೆತಕ್ಕೆ ಮನಸ್ಸು ಬದಲಾವಣೆ ಆಗುತ್ತದೆ. ಬದಲಾವಣೆ ಮನಸ್ಸಿಗೆ ಭಯ ಹುಟ್ಟಿಸುತ್ತದೆ. ಭಯದ ಕತ್ತಲು ಕವಿಸಿ ಕಾಡಿಸಿ ಪೀಡಿಸುವ ದೇವ-ದೇವತೆಗಳು ಹಲವು. ದೇವರುಗಳ ಕುರಿತು ವಿಚಾರ ಮಾಡತೊಡಗಿದರೆ, ಅದೊಂದು ಅದ್ಭುತ ವಿಸ್ಮಯಕಾರಕ ಪ್ರಪಂಚ, ಕಲ್ಪನೆಗಳ ಹಿಂದೆ ಭಯ ಬೇಡಿಕೆ, ಆಸೆ, ಕನಸು ನನಸು ಇತ್ಯಾದಿ ಈ

ಕಾಲ್ಪನಿಕ ದೇವರುಗಳ ಪ್ರಪಂಚ ಆಗಿದೆ. ಪ್ರತಿಯೊಂದು ದೇವರುಗಳ ಹಿಂದೆ ಒಂದಲ್ಲ ಒಂದು ಕಥೆ ಇಲ್ಲವೇ ಪುರಾಣ ಇದ್ದೇ ಇರುತ್ತದೆ. ಇಂತಹ ದೇವರುಗಳ ಉತ್ಸವಗಳೇ 'ಪೌರಾಣಿಕ ದೇವರೋತ್ಸವಗಳೆಂದು' ಕರೆಯಲಾಗಿದೆ. ಈ ದೇವರೋತ್ಸವಗಳು ಜನಪದರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಅಂತರಂಗ ಬಹಿರಂಗ ದರ್ಶನಕ್ಕೆ ಆಕಾರಗಳನ್ನು ಒದಗಿಸುತ್ತವೆ.

೩ : ೧) (೧) ಬೀದರಿನ ನರಸಿಂಹದೇವರ ಉತ್ಸವ :

ಬೀದರ ನಗರದಿಂದ ೨ ಕಿ.ಮೀ. ದೂರ ಅಂತರದಲ್ಲಿ ನರಸಿಂಹನ ಗುಹಾಂತರ ದೇವಾಲಯವಿದೆ. ಈ ನರಸಿಂಹನ ಕಾಲದ ಬಗ್ಗೆ ಯಾವುದೇ ಪುರಾಣಗಳು ದೊರೆಯದೇ ಇದ್ದರೂ ೧೫–೧೬ ಶತಮಾನ ಎಂದು ಹೇಳಲಾಗುತ್ತದೆ. ನಾಡಿನ ನಾನಾ ಕಡೆಗಳಿಂದ ಇಲ್ಲಿಗೆ ಭಕ್ತರು ಬರುತ್ತಾರೆ. ಗುಹೆಯಲ್ಲಿರುವ ನರಸಿಂಹ ದೇವರ ದರ್ಶನ ಮಾಡಲು ಎದೆ ಅಳತೆಯ ನೀರಿನಲ್ಲಿಯೇ ಹೋಗಬೇಕಾಗುತ್ತದೆ. ಅದು ಇಲ್ಲಿನ ವಿಶೇಷತೆ. ನೀರಿನ ಪಾತಳಿ ಎಲ್ಲ ಕಾಲದಲ್ಲಿಯೂ ಒಂದೇ ಪ್ರಮಾಣದಲ್ಲಿರುತ್ತದೆ. ಭಕ್ತರು ಈ ಕ್ಷೇತ್ರದಲ್ಲಿ ಅನೇಕ ಮಂಗಲ ಕಾರ್ಯಗಳನ್ನು ಮಾಡುತ್ತಾರೆ.

ಪ್ರತಿ ಶನಿವಾರ ಉತ್ಸವವೇ ಜರುಗುತ್ತದೆ. ಏಕೆಂದರೆ ಅಷ್ಟೊಂದು ಸಂಖ್ಯೆಯ ಭಕ್ತರು ಸೇರಿರುತ್ತಾರೆ. ಹರಕೆಹೊತ್ತ ಕುರುಬ, ಕಬ್ಬಲಿಗ್ಗರು, ಕುರಿ–ಕೋಳಿ ಬಲಿ ಕೊಡುವರು. ಲಿಂಗಾಯತರು ಬ್ರಾಹ್ಮಣರು ಸಸ್ಯಹಾರಿ ನೈವೇದ್ಯ ಮಾಡುವರು. ತೆಂಗು ಕಾಯಿ ಅರ್ಪಿಸುವರು ನವದಂಪತಿಗಳು ನರಸಿಂಹ ಕೊಳದಲ್ಲಿ ಮಿಂದು ದರ್ಶನ ಪಡೆದು ಹೋದರೆ ಬೇಗ ಮಕ್ಕಳಾಗುತ್ತವೆಂಬ ನಂಬಿಕೆ ಇಲ್ಲಿದೆ. ಆದರೆ ಯಾವುದೇ ರೀತಿಯ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುವುದಿಲ್ಲ. ಹರಕೆ ಮಾಡಿದವರು ಮಾತ್ರ ಉತ್ಸವದಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಉತ್ಸವ ಸಾಮಾನ್ಯವಾಗಿ ಕಂಡರೂ ಭಕ್ತರಿಂದ ಭಾರಿ ಪ್ರಮಾಣದ ಕಾಣಿಕೆ (ಹಣ) ಬರುತ್ತದೆ. ಸರಕಾರವಾದರೂ ಈಚೆಗೆ ಈ ದೇವಾಲಯವನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ.

೩ : ೧) (೨) ದಿಗಂಬರ ಮಾಣಿಕೇಶ್ವರ ಶಿವಯೋಗಿಗಳ ದೇವರೋತ್ಸವ :

ಹಿಂದೂ–ಮುಸ್ಲಿಂ ಬಾಂಧವರ ಮಧ್ಯ ಭಾವೈಕ್ಯದ ಕಹಳೆ ಮೊಳಗಿಸಿದವರಲ್ಲಿ ಶ್ರೀ ದಿಗಂಬರ ಮಾಣಿಕೇಶ್ವರ ಶಿವಯೋಗಿಗಳು ಅಗ್ರಪಂಕ್ತಿಗೆ ಸೇರುತ್ತಾರೆ. ಪ್ರತಿ ವರ್ಷ ಯುಗಾದಿ ಹಬ್ಬವಾದ ಏಳು ದಿವಸಕ್ಕೆ ಗುಲ್ಬರ್ಗಾದ ಕಲ್ಮೂಡದಲ್ಲಿ ಹಾಗೂ ಯುಗಾದಿ ದಿನದಂದು ಹುಟ್ಟೂರಾದ ಬೀದರದ ಯರನಳ್ಳಿ ಗ್ರಾಮದಲ್ಲಿ ಅತಿ ವೈಭವದಿಂದ ಉತ್ಸವ ಜರುಗುತ್ತದೆ.

ಯುಗಾದಿ ಹಬ್ಬದ ಮರುದಿನದಂದು ಏಳು ದಿವಸದವರೆಗೆ ಸಪ್ತಾಹ ಕಾರ್ಯಕ್ರಮ ಜರುಗುವುದು.

ಉತ್ಸವದ ಸಮಯದಲ್ಲಿ ಲಿಂಗೈಕ್ಯ ಶ್ರೀ ದಿಗಂಬರ ಮಾಣಿಕೇಶ್ವರನ ಸಮಾಧಿಗೆ ದಿನದಲ್ಲಿ ಮೂರು ಬಾರಿ ಪೂಜೆ ಅಭಿಷೇಕ ನೆರವೇರುತ್ತದೆ. ದೂರದಿಂದ ಬಂದ ಭಕ್ತರು ತೆಂಗು ಕಾಯಿ ಕರ್ಪೂರದಿಂದ ಅರ್ಚನೆಗೈದು ಒಂದು ರಾತ್ರಿ ಮಠದಲ್ಲಿಯೇ ಮಲಗುವ ಪರಿಪಾಠವಿದೆ. ಸಂಜೆ ಹೊತ್ತಿನಲ್ಲಿ ಭಜನೆ ಮೇಳಗಳಿಂದ ಗೀಗೀ ಪದಗಳಿಂದ ಉತ್ಸವಕ್ಕೆ ವಿಶೇಷ ಮೆರಗು ಬರುತ್ತದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ವಾರ್ತಾ ಪ್ರಚಾರ ಇಲಾಖೆಯವರು ಮನೋರಂಜನೆ ಕಾರ್ಯಕ್ರಮಗಳನಲ್ಲದೆ ಸರಕಾರದ ಯೋಜನೆಗಳು ಕುರಿತು ಮಾಹಿತಿ ಒದಗಿಸುತ್ತಾರೆ.

ಉತ್ಸವಕ್ಕೆ ಬಂದ ಭಕ್ತರಿಗಾಗಿ ಖಾಂಡ(ಪಾಯಸ) ಹುಗ್ಗಿ ವ್ಯವಸ್ಥೆಯಿರುತ್ತದೆ. ಉತ್ಸವದ ಕೊನೆಯ ದಿನದಂದು ಪಲ್ಲಕ್ಕಿ ಉತ್ಸವ ಜರುಗುವುದು. ಈ ಕಾರ್ಯಕ್ರಮದಲ್ಲಿ ಮೂರು ನಾಲ್ಕು ಸಾವಿರ ಭಕ್ತರು ಭಾಗವಹಿಸುತ್ತಾರೆ. ಶಿವಯೋಗಿಗಳ ಕುರಿತು ಜಯಘೋಷಗಳು ಭಕ್ತರ ಕಂಠದಿಂದ ಹೊಮ್ಮಿ ಮುಗಿಲಿಗೆ ಮುಟ್ಟುವಂತಿರುತ್ತವೆ. ಭಜನೆ ಮೇಳಗಳಿಂದ ವಾದ್ಯಗಳಿಂದ ಭಕ್ತರಿಂದ ಗದ್ದಲವೇ ಗದ್ದಲ ಕಂಪಿಸುತ್ತದೆ. ಹಲಗಿ–ಡೊಳ್ಳು ನಾದಗಳಿಂದ ಕುಣಿತ ಜೋರಾಗಿರುತ್ತದೆ. ಹಾಡುಗಳಿಂದ ಕಿವಿಗೆ ಇಂಪನ್ನು ತಂದು ಕೊಡುತ್ತದೆ.

ಮಾಣಿಕೇಶ್ವರ ಶಿವಯೋಗಿಗಳ ಕಥೆಯು ಹೀಗಿದೆ. ಲಿಂಗೈಕ್ಯ ಶ್ರೀ ದಿಗಂಬರ ಮಾಣಿಕೇಶ್ವರ ಶಿವಯೋಗಿಗಳು ಬೀದರಿನ ಯರನ್ನಳ್ಳಿ ಪಟೇಲ ವೀರಶೈವ ಸುಸಂಸ್ಕೃತ ಮನೆತನದಲ್ಲಿ (೧೯೦೧ರಲ್ಲಿ) ಜನ್ಮ ತಾಳಿದರು. ಹದಿನೈದು ವರ್ಷದವರೆಗೆ ಹುಟ್ಟೂರಿನ ರೇವಣಸಿದ್ಧ ಮಠದಲ್ಲಿ ಪ್ರಾರ್ಥನೆ, ಪ್ರವಚನ ಮಾಡಿ, ಬ್ರಹ್ಮಾನಂದ ಗ್ರಂಥ ಓದಿ, ಕೊನೆಯಲ್ಲಿ ಬ್ರಹ್ಮಚಾರಿಗಳಾದರು.

ಸುಮಾರು ಮೂವತ್ತು ವರ್ಷಗಳ ಕಾಲ ದಕ್ಷಿಣ ಕಾಶಿಯೆಂದು ಹೆಸರುವಾಸಿಯಾದ ಯಾತ್ರಾಸ್ಥಳ ಬೀದರ ಜಿಲ್ಲೆಯ ಮೈಲಾರದಲ್ಲಿ ಯೋಗ ಸಿದ್ಧಿ ಸಾಧನೆ ಮಾಡಿ ತನ್ನ ಸ್ವ ಇಚ್ಛೆಯಂತೆ ಗುಲಬರ್ಗಾದ ಸ್ವಂತ ಹಳ್ಳಿಗೆ ಪ್ರಯಾಣ ಮಾಡಿ (೧೯೭೦) ಕಲ್ಮೂಡದಲ್ಲಿ ಲಿಂಗೈಕ್ಯರಾದರು. ಆ ವರ್ಷವೇ ಸ್ಮರಣಾರ್ಥವಾಗಿ ಅವರ ಭಕ್ತರು ಉತ್ಸವ ನಡೆಸಲು ಪ್ರಾರಂಭಿಸಿದರು. ಉತ್ಸವ ಸಾಮಾನ್ಯವಾದರೂ ಅಲ್ಲಿ ನಡೆಯುವ ಮನೋರಂಜನೆಗಳು ಸಾಂಸ್ಕೃತಿಕ ಕಲಾಮೇಳಗಳು, ಭಜನೆ ಪದಗಳು ಬಹು ಆಕರ್ಷಕವಾಗಿವೆ.

೩ : ೧) (೩) ಗುರುನಾನಕ ಉತ್ಸವ :

ಸಿಖ್ ಮತ ಪ್ರವರ್ತಕ ಗುರುನಾನಕ ಅವರ ಸಾನಿಧ್ಯದಿಂದ ಪುನೀತವೆನಿಸಿರುವ ಬೀದರಿನ ಗುರುನಾನಕ ಕ್ಷೇತ್ರ 'ನಾನಕ ಝೀರ್' ಎಂದೇ ಹೆಸರಾಗಿದೆ. ಗುರುನಾನಕರು ೧೫೧೧ರಲ್ಲಿ ತೀರ್ಥಯಾತ್ರೆ ಮತ್ತು ತತ್ವ ಪ್ರಚಾರಕ್ಕೆಂದು, ದಕ್ಷಿಣ ಭಾರತ ಕಡೆ ಹೊರಟರು.

ಅವರು ನಾಗಪುರ ಓಂಕಾರೇಶ್ವರ, ನಾಚಿದೇಡ, ಭಾಗ್ಯನಗರ, ಮಾರ್ಗವಾಗಿ ಬೀದರನ್ನು ತಲುಪಿದರು. ಬೀದರ ನಗರದ ಪಕ್ಕದಲ್ಲಿರುವ ಪ್ರಶಾಂತ ಸ್ಥಳವೊಂದನ್ನು ಕಂಡು ಬೀಡು ಬಿಟ್ಟರು. ನಾನಕರು ಅಲ್ಲಿದ್ದಾಗ ಆ ಪ್ರದೇಶದಲ್ಲಿ ಕುಡಿಯುವ ನೀರಿನ ಅಭಾವ ಉಂಟಾಯಿತು. ಸ್ಥಳೀಯ ಜನರ ನೀರಿನ ಕಷ್ಟವನ್ನು ಕಂಡು ಗುರುನಾನಕರು ಕನಿಕರ ಪಟ್ಟರು. ಬೆಟ್ಟದ ತುದಿಯನ್ನು ಕಾಲಿನಿಂದ ಮೆಟ್ಟಿ ಸಿಹಿ ನೀರು ಹೊರ ಹರಿಯುವಂತೆ ಮಾಡಿದರು. ಇದೇ 'ನಾನಕ ಝುರ್' ಎಂದು ಹೆಸರಾಯಿತೆನ್ನುವ ದಂತ ಕಥೆ ಇದೆ.

ನೀರಿನ ಝುರಿ ಮೊದಲಿನಿಂದಲೂ ಇತ್ತು. ಇದರ ಸುತ್ತಲೂ ಇದ್ದ ಹಸಿರಿನ ತಂಪಿನಿಂದ ನಾನಕರು ಆಕರ್ಷಕರಾದರು. ಅವರು ಕೆಲಕಾಲ ಅಲ್ಲಿಯೇ ಉಳಿದು ಧರ್ಮೋಪದೇಶ ಮಾಡಿದರು. ಅವರ ಸ್ಪರ್ಶ ಸಾನಿಧ್ಯಗಳಿಂದ ಪವಿತ್ರಗೊಂಡ ಆ ಜಲಧಾರೆ ನಾನಕ ಝುರಾ ಸಾಹೇಬ ಎಂದು ಖ್ಯಾತಿ ಪಡೆಯಿತು. ನಾನಕ ಝುರಾದ ನೀರು ಬಲು ರುಚಿಕರ. ಅಷ್ಟೇ ಅಲ್ಲ ಆರೋಗ್ಯಕರ ಕೂಡ ಅಲ್ಲದೆ ಪವಿತ್ರ ಪ್ರೇಕ್ಷಣೀಯ ಸ್ಥಳ. ಅಲ್ಲೊಂದು ಗುರುದ್ವಾರವಿದೆ. ಅಲ್ಲಿಯೇ ಒಂದು ಪ್ರಬಂಧಕ ಸಮಿತಿಯ ಕಛೇರಿ ಇದೆ. ಪ್ರತಿವರ್ಷ ಗುರುನಾನಕರ ಹಟ್ಟು ಹಬ್ಬವನ್ನು ಕಾರ್ತಿಕ ಪೂರ್ಣಿಮೆಯಂದು, ಮೂರು ದಿನಗಳ ಕಾಲ ಉತ್ಸವನ್ನು ಪ್ರಬಂಧಕ ಸಮಿತಿಯವರು ಏರ್ಪಡಿಸುತ್ತಾರೆ. ದೇಶದ ನಾನಾ ಕಡೆಗಳಿಂದ ಸಿಖ್ಖರು ಬರುತ್ತಾರೆ. ಗುರುದ್ವಾರದಲ್ಲಿ ಕೀರ್ತನೆ ಸತ್ಸಂಗಗಳೂ, ಗುರು ಗ್ರಂಥ ಸಾಹೇಬ ಗ್ರಂಥದ ಅಖಂಡ ಪಠಣವೂ ನಡೆಯುತ್ತದೆ. ಅನ್ನ ಸಂತರ್ಪಣೆ ವ್ಯವಸ್ಥೆಯೂ ಇದೆ.

ಉತ್ಸವದ ದಿನಗಳಲ್ಲಿ ಗುರುದ್ವಾರವನ್ನು ವಿದ್ಯುತ್ ದೀಪಗಳಿಂದ ಅಲಂಕರಿಸುತ್ತಾರೆ. ಹಗಲೂ ರಾತ್ರಿ ಭಜನೆ ನಡೆಯುತ್ತದೆ. ನಗರದಿಂದ ವೀರಶೈವರು, ಬ್ರಾಹ್ಮಣರು ಇನ್ನಿತರರು ವರ್ಗದ ಜನರು ಗುರುನಾನಕರ ದರ್ಶನ ಪಡೆಯಲು ಗುರುದ್ವಾರಕ್ಕೆ ಧಾವಿಸುತ್ತಾರೆ. ಗುರುದ್ವಾರದೊಳಗೆ ಕಾಲಿಡುವಾಗ ತಲೆಯ ಮೇಲೆ ಬಟ್ಟೆ ಹಾಕಿಕೊಳ್ಳಬೇಕೆಂಬ ಕಟ್ಟುನಿಟ್ಟಾದ ನಿಯಮ ಇದೆ.

ಉತ್ಸವದ ಕೊನೆಯ ದಿನ ಗುರುನಾನಕರ ಹೆಸರಿನ ಪೀಠಗಳೊಂದಿಗೆ ಸಂಜೆ ಹೊತ್ತಿನಲ್ಲಿ ಮೆರವಣಿಗೆ ಮಾಡುತ್ತಾರೆ. ಸಹಸ್ರಾರು ಸಿಖ್ಖರು ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಾರೆ. ಖಡ್ಗಗಳು ತಿರುವುತ್ತಾರೆ. ಕುದರೆಯ ಮೇಲೆ ಕುಳಿತು ಕುಣಿಸುತ್ತಾರೆ. ಭಜನೆ ಮಾಡುತ್ತಾರೆ. ಹಲಗೆ, ತಾಸ್ಯಾ, ಬ್ಯಾಂಡುಗಳಿಂದ ಕಿವಿಗಳು ಕಿರ್ರ ಎನ್ನುತ್ತವೆ. ವಾದ್ಯಗಳ ಗತ್ತಿಗೆ ಕುಣಿಯುತ್ತಾರೆ. ರಂಗಿನಿಂದ ಕೂಡಿದ ಸಿಖ್ ಬೆಡಗಿಯರ ಕಡೆ ಪ್ರೇಕ್ಷಕರ ಕಣ್ಣುಗಳ ನೋಟ ತಾಕಿರುತ್ತದೆ. ಚಪ್ಪಾಳೆ ಹಾಕುತ್ತಾರೆ. ಜಾನಪದ ಕಲಾ ಮೇಳದವರು ಭಾಗವಹಿಸುತ್ತಾರೆ. ಗುರುನಾನಕರ 'ಜಯ ಘೋಷಗಳು' ಮೊಳಗುತ್ತವೆ. ರಾತ್ರಿ ೧೦ – ೧೧ ಗಂಟೆ ಸುಮಾರಿಗೆ ಜಾತ್ರೆ ಮುಕ್ತಾಯವಾಗುತ್ತದೆ. ಯಾವುದೇ ಅಹಿತಕರ ಘಟನೆ ಜರುಗದಂತೆ ಪೋಲಿಸ ಇಲಾಖೆಯವರು ತೀವ್ರ ಕಾಳಜಿ ವಹಿಸುತ್ತಾರೆ. ಗುರುನಾನಕರ ಉತ್ಸವದಲ್ಲಿ ಪಾಲ್ಗೊಂಡ ಪ್ರತಿಯೊಬ್ಬನಿಗೂ ಪಂಜಾಬಿ ಸಂಸ್ಕೃತಿಯ ಅರಿವು ಹುಟ್ಟುವುದರಲ್ಲಿ ಅನುಮಾನವೇ ಇಲ್ಲ.

೩ : ೧)  (೪) ಅಷ್ಟೂರಿನ ಅಲ್ಲಮ ಪ್ರಭು ದೇವರೋತ್ಸವ :

ಬೀದರ ನಗರದಿಂದ ಕೇವಲ ಐದು (೫) ಕಿ.ಮಿ. ದೂರದಲ್ಲಿರುವ ಅಷ್ಟೂರ ಎಂಬ ಹಳ್ಳಿ ಅಷ್ಟೇನು ಸುಶಿಕ್ಷಿತ ಗ್ರಾಮವೇನಲ್ಲ. ಜಿಲ್ಲೆಯ ಅನೇಕ ಹಳ್ಳಿಗಳಂತೆ ನಿರಕ್ಷತೆ ಹಾಗೂ ಇತರ ಅನೇಕ ಅನಾನುಕೂಲತೆಗಳು ಈ ಗ್ರಾಮವನ್ನು ಮುಸುಕಿದೆ. ಕುಡಿಯುವ ನೀರಿಗಾಗಿ ಪರದಾಡುವ ಪ್ರಸಂಗವಿದೆ. ಇಂತಹ ಕುಗ್ರಾಮದಲ್ಲಿ ರಾಷ್ಟ್ರೀಯ ಭಾವೈಕ್ಯ ಹಾಗೂ ಕೋಮು ಸೌಹಾರ್ದ ಭಾವನೆ ಹೇಗೆ ಎಂಬುದರ ಬಗ್ಗೆ ಕೆಲವರಿಗೆ ಆಶ್ಚರ್ಯವಾಗಬಹುದು.

ಅನೇಕ ಶತಮಾನಗಳಿಂದ ಬಂದ ಐತಿಹಾಸಿಕ ಪರಂಪರೆ ಅವರನ್ನು ಈ ಉತ್ತಮ ಮಾರ್ಗಕ್ಕೆ ಕರೆದುಕೊಂಡು ಹೋಗಿದೆ. ಹಾಗೆ ನೋಡಿದರೆ ಇಡೀ ಬೀದರ ಜಿಲ್ಲೆಯ ಇತಿಹಾಸದ ಪುಟವನ್ನು ಒಮ್ಮೆ ತಿರುವಿ ನೋಡಿದರೆ ವಿವಿಧ ಜಾತಿ ಧರ್ಮಗಳ ಅಪೂರ್ವ ಸಂಗಮವಿದೆ. ಇತರ ಧರ್ಮಿಯರು ಹೋಗಿ ಹರಕೆ ನೈವೇದ್ಯ ಕಾಣಿಕೆಗಳನ್ನು ಸಲ್ಲಿಸುವುದು ಮುಸ್ಲಿಂ ಜತೆ ಸೇರಿ ಉರಸ್‌ಗಳಲ್ಲಿ ಭಾಗವಹಿಸುವ ದೃಶ್ಯ ಸಾಮಾನ್ಯವಾಗಿದೆ. (ಬಸವಕಲ್ಯಾಣದಲ್ಲಿ ಬಸವೇಶ್ವರ ಪೀಠದ ಪಕ್ಕದಲ್ಲಿಯೇ ಮುಸ್ಲಿಂ ದರ್ಗಾ ಕೂಡ ಇದೆ.) ಅಂದ ಹಾಗೆ ಬೀದರ ಜಿಲ್ಲೆ ವಿವಿಧ ಜಾತಿ ಮತಗಳ ಏಕತೆಯ ಸಂಕೇತವೆಂದರೆ ತಪ್ಪಾಗಲಾರದು.

ವಿವಿಧ ಜಾತಿ ಧರ್ಮಗಳ ಏಕತೆಗೆ ಶ್ರಮಿಸಿದ ಅಹಮ್ಮದಷಾ ವಾಲಿ ಕಲ್ಬುರ್ಗಿಯಲ್ಲಿ ತನ್ನ ಗುರುವಿನ ನೆನಪಿಗಾಗಿ ಕಟ್ಟಿಸಿದ ದರ್ಗಾದಲ್ಲಿ ಇಂದಿಗೂ ಹಿಂದೂ ಮತ್ತು ಮುಸ್ಲಿಂರು ತಮ್ಮ ಧಾರ್ಮಿಕ ಗೌರವ ಸಲ್ಲಿಸುತ್ತಾರೆ. ಈತನ ಉದಾನ ನೀತಿಯೇ ಬೀದರಿನ ಇತಿಹಾಸದಲ್ಲಿ ಖಾಯಂ ದಾಖಲೆಯಾಗಿ ಉಳಿದಿದೆಯಲ್ಲದೇ ಇಂದು ಅವನನ್ನು ಹೂಳಿದ ಗೋರಿ ದೇವಾಲಯವಾಗಿ ಮಾರ್ಪಟ್ಟಿದೆ. ಈ ದರ್ಗಾದಲ್ಲಿ ಚೈತ್ರ ಮಾಸದ ಪ್ರಾರಂಭದಲ್ಲಿ ನಡೆಯುವ ವಾರ್ಷಿಕ ಉತ್ಸವನ್ನು "ಅಲ್ಲಮ್ಮ ಪ್ರಭು ದೇವರೋತ್ಸವ" ಎಂದು ಕರೆಯಲಾಗುತ್ತದೆ. ಐದು ದಿನಗಳವರೆಗೆ ನಡೆಯುವ ಈ ಉತ್ಸವಕ್ಕೆ ಮುಖ್ಯ ಅರ್ಚಕರಾಗಿ ಮಾಡ್ಯಾಳದ ಒಕ್ಕಲಿಗ ಮನೆತನದವರು ಕಾರ್ಯ ನಿರ್ವಹಿಸುತ್ತಾರೆ. ಈ ಮನೆತನದವರು ಇಲ್ಲಿಂದ ೧೨೦ ಕಿ.ಮೀ. ದೂರದಲ್ಲಿರುವ ಕಲ್ಬುರ್ಗಿ ತಾಲ್ಲೂಕಿನ ಮಾಡ್ಯಾಳ ಗ್ರಾಮದಿಂದ ಅನೇಕ ಸಹಚರರೊಡನೆ ಧಾರ್ಮಿಕ ವಿಧಿ ನೆರವೇರಿಸಿ ಪಲ್ಲಕ್ಕಿ ಉತ್ಸವದೊಂದಿಗೆ ನಡೆದುಕೊಂಡೇ ಬೀದರಿನ ಅಷ್ಟೂರ ಗ್ರಾಮಕ್ಕೆ ಬರುತ್ತಾರೆ. ಅವರು ದರವೇಶ ರೀತಿಯಲ್ಲಿ ಬಟ್ಟೆಗಳನ್ನು ಧರಿಸುತ್ತಾರೆ. ಈ ಜಂಗಮರು ಧಾರ್ಮಿಕ ವಿಧಿಯಿಂದ ಪೂಜೆ ಮಾಡಿ ಉದ್ಘಾಟಿಸಿದ ನಂತರವೇ ಉರುಸ್ ಆರಂಭವಾಗುತ್ತದೆ. ಈ ಐದು ದಿನಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಹಿಂದೂ ಮುಸ್ಲಿಂ ಭಕ್ತರು ಜತೆ ಸೇರಿ ಆನಂದದಿಂದ ಕಾಲ ಕಳೆಯುತ್ತಾರೆ. ಕುಸ್ತಿ, ಭಜನೆ, ಮೇಳಗಳು, ಲಾವಣಿ ಪದಗಳು, ಹೀಗೆ ಹತ್ತಾರು ಬಗೆಯ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತವೆ. ಉತ್ಸವಕ್ಕೆ ಬಂದವರು ಸಾಣಿಕಲ್ಲಿನಿಂದ ಗಂಧ ಬಳಿದುಕೊಳ್ಳುತ್ತಾರೆ.

ಹಿಂದೂಗಳು ತೆಂಗು ಒಡೆಯುವರು. ಮುಸಲ್ಮಾನರು ಫಾತೆ ಕೊಡುವರು ಊದು ಹಾಕುವರು. ಇದು ಬೀದರ ಜಿಲ್ಲೆಯಲ್ಲಿಯೇ ಅತ್ಯಂತ ದೊಡ್ಡ ಪ್ರಮಾಣದ ಉರುಸ್ ಆಗಿದೆ.

ಉರುಸ್ ಮುಗಿದ ನಂತರ ನಡೆದುಕೊಂಡೇ ಮಾಡ್ಯಾಳದ ಪೂಜಾರಿ ಮತ್ತು ಅವರ ಪರಿವಾರ ಮಾಡ್ಯಾಳಕ್ಕೆ ಹಿಂತಿರುಗುವರು. ಇದೊಂದು ಈ ಉತ್ಸವದ ವೈಶಿಷ್ಟ್ಯ.

ಮಾಡ್ಯಾಳದ ಒಕ್ಕಲಿಗ ಮನೆತನಕ್ಕೂ ಈ ಅಹಮ್ಮದ ಷಹವಲಿಗೂ ಏನೂ ಸಂಬಂಧವಿದೆಯೆಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಈ ವಡವಾಳಸಿದ್ದ ನಾಗೇಶನ ಗುರುಬಂಧು ನವಾಜನು ಬಂದೇನವಾಜನ ಶಿಷ್ಯನು ಅಹಮ್ಮದ ಷಹನು ಈ ಮಾಡಿಹಾಳ ಮನೆತನಕ್ಕೆ ವಡವಾಳಸಿದ್ಧನಿಗೂ ಸಂಬಂಧವಿದ್ದಿರಬಹುದೋ ಅಥವಾ "ಸಿದ್ಧಲಿಂಗ" ಎಂಬ ಅಜ್ಞಾತ ಕವಿಯ ಸಂಬಂಧವಿದ್ದಿರಬಹುದೋ ಅಂತೂ ಮಾಡಿಹಾಳು ತೇರುವಾಳು, ಬಿರೊಳ್ಳಿ ಮುಂತಾದ ಸ್ಥಳಗಳಲ್ಲಿ ಅಲ್ಲಮ ಪ್ರಭುವಿನ ಸಮಾಧಿಗಳೆಂದು ಹೇಳಿಕೊಳ್ಳುವ ರೂಢಿಯ ಈ ಬಾದಷಹನ ಸಮಾಧಿಯಿಂದ ಪ್ರಾರಂಭವಾಗಿರಬಹುದು. ಅಂತೆಯೇ ಎಲ್ಲ ಕಡೆಗೂ ಇಸ್ಲಾಮಿಯ ಪದ್ಧತಿಯ ಪ್ರಕಾರ ಗೋರಿಗಳಿವೆ.

ಅಷ್ಟೂರಿನಲ್ಲಿರುವ ಎಂಟು ಗೋರಿಗಳಲ್ಲಿ ಅಹಮ್ಮದಷಾವಲಿಯ ಗೋರಿಯೇ ಅತ್ಯಂತ ದೊಡ್ಡದು. ಈ ದರ್ಗಾದ ಉತ್ತರ ೧೦೧ ಅಡಿ ೯ ಅಂಗುಲ ಅದನ್ನು ಚಾರಸಾಕಾರದಲ್ಲಿ ನಿರ್ಮಿಸಲಾಗಿದ್ದು, ಪ್ರತಿ ಗೋಡೆಯ ಉದ್ದ ೭೭ ಅಡಿ ಒಂದು ಅಂಗುಲವಿದೆ. ಇಂದು ಅಂದಿನ ಇಂಜಿನಿಯರಿಂಗ್ ವೈಶಿಷ್ಟ್ಯಕ್ಕೆ ಒಂದು ಉತ್ತಮ ಉದಾಹರಣೆ ಹೊರಗಿನಿಂದ ನೋಡಲು ಈ ದರ್ಗಾ ಅಷ್ಟೇನೂ ಕಲಾತ್ಮಕವಾಗಿ ಕಾಣದಿದ್ದರೂ ಒಳಗಡೆ ಗೋರಿಯ ಗುಮ್ಮಟದ ಛಾವಣಿಯ ಮೇಲೆ ಅತ್ಯಂತ ಕಲಾತ್ಮಕ ಅಪರೂಪದ ಕೃತಿಗಳಿವೆ.

ಹೊರಗಡೆಯ ಕನ್ನಡಿಯೊಂದನ್ನು ಒಂದು ಕೋನದಲ್ಲಿ ಸೂರ್ಯ ಪ್ರಕಾಶದತ್ತ ಹಿಡಿದರೆ ಈ ವರ್ಣ ಕಲಾಕೃತಿಯನ್ನು ನೋಡಬಹುದಾಗಿದೆ. ಆದರೆ ಅದನ್ನು ಸಂಪೂರ್ಣವಾಗಿ ಆನಂದಿಸಲು ಒಳಗಡೆ ವಿದ್ಯುತ್ ದೀಪದ ವ್ಯವಸ್ಥೆ ಮಾಡಲಾಗಿದೆ. ಅಜಂತಾ ವರ್ಣ ಕಲೆಯ ಮಾದರಿಯನ್ನು ಈ ಗೋರಿಯ ಒಳಗಡೆ ಕಾಣಬಹುದು ಸೂಫಿಸಂತರ ವಚನಗಳನ್ನು ಒಳಗಡೆ ಕೆತ್ತಲಾಗಿದ್ದು ಪರ್ಷಿಯನ್ ಶಿಲ್ಪಿಗಳು ಗೋರಿಯನ್ನು ನಿರ್ಮಿಸಿರುವುದು ಸ್ಪಷ್ಟವಾಗಿದೆ. ಇದೊಂದು ಭಾರತೀಯ ಮತ್ತು ಪರ್ಷಿಯನ್ ಕಲೆಯ ಅಪರೂಪದ ಸಂಗಮವಾಗಿದೆ.

೩ : ೧) (೫) ಬಕ್ಕಪ್ರಭು ದೇವರೋತ್ಸವ :

ಬೀದರ ಜಿಲ್ಲೆ ಸಾಧು ಸಂತರ ಶರಣರ ಶರಣೆಯರ ಸಿದ್ಧಿ ಪುರುಷರ ಕೇಂದ್ರ ಸ್ಥಳವಾಗಿದೆ. ಭಕ್ತಿಯ ಕೆಚ್ಚು ಅನುಭಾವದ ಅಚ್ಚು ಇಲ್ಲಿಯ ನೆಲದ ಗುಣವಾಗಿದೆ. (ಎಂ.ಎಸ್. ಲಠ್ಠೆ ಮತ್ತು ರೆಡ್ಡಿ ೧೯೮೭) ಹನ್ನೆರಡನೆಯ ಶತಮಾನದ ಬಸವಾದಿ ಶರಣರಿಂದ ಈ ನಾಡು ಪುಣ್ಯದ ಬೀಡಾಗಿದೆ. ಆಗಿ ಹೋದ ಹತ್ತಾರು ಶಿವಶರಣರಲ್ಲಿ ಸಿದ್ಧಿ ಪುರುಷ ಶಿವಯೋಗಿ ಬಕ್ಕಪ್ರಭು ಒಬ್ಬರು.

ಬೀದರ ಜಿಲ್ಲೆಯ ಹುಮನಾಬಾದ ತಾಲ್ಲೂಕಿನಿಂದ ಸುಮಾರು ೪೩ ಕಿ.ಮೀ. ದೂರದಲ್ಲಿರುವ ಕರಕನಳ್ಳಿ ಇದು ಬಕ್ಕಪ್ರಭು ಎಂಬ ಶಿವಯೋಗಿಗಳು ವಾಸಿಸಿದ ಸ್ಥಾನ.

ಆಂಧ್ರದ ಗೊಟ್ಟಂಗೊಟ್ಟಿ ಎಂಬಲ್ಲಿ ತಪಸ್ಸನ್ನು ಮಾಡಿದ ಈ ಮಹಾಮಹಿಮರು ಸರಳ ಜೀವಿಗಳು ಬ್ರಹ್ಮಜ್ಞಾನಿಗಳೂರ ಆಗಿದ್ದರಂತೆ. ಮಾನವ ಪ್ರೇಮಿಗಳು ಹೌದು. ಇವರ ದಿವ್ಯ ಜೀವನ ಕುರಿತ ಹಲವಾರು ಜಾನಪದ ಹಾಡುಗಳು ಭಕ್ತರ ಭಾವನೆಗಳು ಅಭಿವ್ಯಕ್ತಗೊಳಿಸುತ್ತವೆ. ಇಂತಹ ಮಹಾಪುರುಷರ ಪಾದಸ್ಪರ್ಶದಿಂದ ಧನ್ಯವಾಯಿತು ಕರಕನಳ್ಳಿ ಗ್ರಾಮದ ನೆಲ. ಇಲ್ಲಿ ಶ್ರೀಗಳ ಗದ್ದುಗೆ ಇದೆ. ಪ್ರತಿ ವರ್ಷ ಮಾರ್ಚ ತಿಂಗಳಲ್ಲಿ ವೈಭವದಿಂದ ಉತ್ಸವ ಜರುಗುತ್ತದೆ. ಉತ್ಸವದ ಸಮಯದಲ್ಲಿ ಪೂಜೆ ನೈವೇದ್ಯ ಅರ್ಪಣೆ ಟೆಂಗು, ಕಾಯಿ, ಕರ್ಪೂರ ವಿನಿಯೋಗಿಸುವ ಪದ್ಧತಿ ಇಲ್ಲಿದೆ. ಜಾತ್ರೆಗೆ ಬಂದ ಭಕ್ತರಿಗಾಗಿ ಅನ್ನಸಂತರ್ಪಣೆ ವ್ಯವಸ್ಥೆ ಮಾಡಿರುತ್ತಾರೆ. ಶ್ರೀಗಳ ಕುರಿತು ಹಾಡುವರು, ಭಜನೆ ಮಾಡುವರು. ಮಂಗಳಾರತಿ ಪದ ಹೇಳಿ ಉತ್ಸವನ್ನು ಮುಗಿಸುವರು.

೩ : ೧) (೬) ಖೇಳಗಿ ಶಿವಲಿಂಗೇಶ್ವರ ಉತ್ಸವ :

ಬಸವಕಲ್ಯಾಣ ತಾಲ್ಲೂಕಿನ ಖೇಳಗಿ ಗ್ರಾಮದಲ್ಲಿ ೧೫-೧೬ನೇ ಶತಮಾನದಲ್ಲಿ ಆಗಿ ಹೋದ ವಿಭೂತಿ ಹಾಗೂ ಪವಾಡ ಪುರುಷ ಶಿವಲಿಂಗೇಶ್ವರ ದೇವಾಲಯವಿದೆ. ಪ್ರತಿವರ್ಷ ಅವರ ಸ್ಮರಣಾರ್ಥವಾಗಿ ಏಪ್ರಿಲ್ ತಿಂಗಳಲ್ಲಿ ಎರಡು ದಿನ ಉತ್ಸವ ನಡೆಸುತ್ತಾರೆ. ಪೂಜೆ ಅಖಂಡ ಶಿವನಾಮ, ಅಭಿಷೇಕ ಮಾಡುವ ಆಚರಣೆಗಳು ಇಲ್ಲಿವೆ. ದೇವರೋತ್ಸವಕ್ಕೆ ಬಂದ ಭಕ್ತರಿಗಾಗಿ ಹಾಗೂ ಸ್ಥಳೀಯರಿಗಾಗಿ ಖಾಂಡ ಮಾಡಿ ಊಟ ಬಡಿಸುತ್ತಾರೆ. ದೂರದಿಂದ ಬಂದ ಭಜನೆ ಮೇಳದವರು ರಾತ್ರಿ ಸಮಯದಲ್ಲಿ ಭಜನೆ ಮಾಡುತ್ತಾರೆ.

ಉತ್ಸವದ ಎರಡನೆಯ ದಿನ ಮುಂಜಾನೆ ಜಂಗಿ ಕುಸ್ತಿ ಸ್ಪರ್ಧೆಗಳು ನಡೆದರೆ ಸಂಜೆ ಹೊತ್ತಿಗೆ ರಥೋತ್ಸವ ಕಾರ್ಯಕ್ರಮವಿರುತ್ತದೆ. ಪ್ರವಚನ ಮತ್ತು ಅಖಂಡ ಶಿವನಾಮ ಸ್ಮರಣೆಯಾದ ನಂತರ ಮಂಗಳ ಕಾರ್ಯಕ್ರಮವಿರುತ್ತದೆ.

೩ : ೧) (೭) ಮಡಿವಾಳೇಶ್ವರ ದೇವರೋತ್ಸವ :

ಬೀದರಿನ ನಾವದಗೇರಿಯಲ್ಲಿ ಹಿಂದೂ ಧರ್ಮದ ಆದಿ ಗುರುವಾದ ಶುಕ್ರಾಚಾರ್ಯರರು ಅನುಷ್ಠಾನ ಮಾಡಿದರು. ಆ ಸ್ಥಳವೇ ಶುಕ್ಲತೀರ್ಥ. ಬಂಡೆಗಲ್ಲು (ಧರಿ) ಒಳಗಿಂದ ನೀರು ಬರುವುದರಿಂದ 'ಶುಕ್ಲತೀರ್ಥ ಝರಿ' ಎಂದು ಇನ್ನೊಂದು ಹೆಸರು. ಈ ತೀರ್ಥದಲ್ಲಿ ಸ್ನಾನ ಮಾಡಿದರೆ ಕಷ್ಟದಲ್ಲಿದ್ದವರು ಸುಖಿಗಳಾಗುತ್ತಾರೆಂದು ಪ್ರತಿದಿವಸ ಭಕ್ತರು ತೀರ್ಥಸ್ನಾನಕ್ಕಾಗಿ ಬರುತ್ತಾರೆ. ಇದರ ಹತ್ತಿರದಲ್ಲಿಯೇ ಬೃಹದಾಕಾರವಾಗಿ ನಿಂತಿದ್ದ ಮಹಮ್ಮದ ಗವಾನನ ಕೋಟೆ ಇದೆ. ದೂರದೂರದಿಂದ ಯಾತ್ರಿಕರನ್ನು ಆಕರ್ಷಿಸಿದ ಪುಣ್ಯ ಕ್ಷೇತ್ರವಾಗಿದೆ. ಶುಕ್ಲತೀರ್ಥ ಪ್ರಾಕೃತಿಕ ಸೌಂದರ್ಯ ಮತ್ತು ನಿಸರ್ಗ ರಮಣೀಯ ದೃಶ್ಯಗಳಿಂದ ಪ್ರವಾಸಿಗ್ಗರ ಸಂದರ್ಶನಕ್ಕೆ ಲಕ್ಷಣವಾದ ಸ್ಥಳವಾಗಿದೆ.

ಇಂಥ ಪುಣ್ಯ ಸ್ಥಳದಲ್ಲಿಯೇ ಆಗಿ ಹೋದ ಪವಾಡ ಪುರುಷ ಸಂತ ಮಡಿವಾಳಪ್ಪನ ಗದ್ದುಗೆ ಇದೆ. ಇವರು ಬದುಕಿಬಾಳಿದ ಯಾವುದೇ ಪುರಾವೆಗಳಿಲ್ಲ. ಬಸವಣ್ಣನವರ ಸಮಕಾಲೀನರು ಎನ್ನಲಾಗಿದೆ. ಆಂಧ್ರದ ಜಹೀರಾಬಾದ ತಾಲ್ಲೂಕಿನ ಜಂಬಗಿ ಗ್ರಾಮದ ಪಟೇಲ ಮನೆತನದ ಶ್ರೀ ಶಾಂತಲಿಂಗ ಶಿವಯೋಗಿಗಳ ಪರಿಶ್ರಮದಿಂದ ಗದ್ದುಗೆ ಸುತ್ತಮುತ್ತ ಮತ್ತು ಮೇಲೆ ಕಲಾತ್ಮಕ ರೀತಿಯಲ್ಲಿ ಗುಡಿ ಗೋಪುರ ನಿರ್ಮಾಗೊಳ್ಳತೊಡಗಿದೆ. ಪ್ರತಿ ವರ್ಷದ ಫಾಲ್ಗುಣ ಮಾಸದಲ್ಲಿ ನಾಲ್ಕು ದಿವಸ ಉತ್ಸವ ಜರುಗುತ್ತದೆ. ಶುದ್ಧ ನವಮಿಯಂದು ಪ್ರಾರಂಭವಾದ ಈ ಉತ್ಸವ ದ್ವಾದಶಿಯಂದು ಮುಕ್ತಾಯವಾಗುತ್ತದೆ. ಉತ್ಸವದ ಪ್ರತಿದಿನ ರೇಣುಕಾಚಾರ್ಯ ಸಿದ್ಧಾಂತ ಸಿಕಾಮಣಿ ಪಾರಾಯಣ, ೬೩ ಶರಣರ ಪಾದ ಪೂಜೆ ಮತ್ತು ಲಿಂಗ ಪೂಜೆ, ೬೩ ಗಣಗಳ ಪೂಜೆ ಹಾಗೂ ಲಿಂಗ ಪೂಜೆ ಮುಂತಾದ ಆಚರಣೆಗಳು ಇಲ್ಲಿವೆ.

ಬೀದರ ನಗರದ ಹಾಗೂ ಸುತ್ತ-ಮುತ್ತಲಿನ ಗ್ರಾಮದ ಭಕ್ತರು ಉತ್ಸವಕ್ಕೆ ಬಂದು ಶುಕ್ಲತೀರ್ಥದಲ್ಲಿ ಸ್ನಾನಮಾಡಿ ತೆಂಗು ಒಡಿದು ಮಡಿವಾಳೇಶ್ವರ ಗದ್ದುಗೆಯ ದರ್ಶನ ಪಡೆದು ಅನ್ನದಾಸೋಹದಲ್ಲಿ ಕುಳಿತು ಪ್ರಸಾದ ಸ್ವೀಕರಿಸುವರು. ಇಲ್ಲಿ ಬಿಲ್ವ ಪತ್ರಿಯ ಮರಗಳ ಸಂಖ್ಯೆ ಸಾಕಷ್ಟಿವೆ. ಉತ್ಸವಕ್ಕೆ ಬಂದ ಭಕ್ತರು ಶುಕ್ಲತೀರ್ಥದಲ್ಲಿ ಮಿಂದು ಮಡಿವಾಳಪ್ಪನ ಗದ್ದುಗೆಯ ಮೇಲೆ ಬಿಲ್ವಪತ್ರಿ ಏರಿಸುವ ಪರಿಪಾಠ ಇಲ್ಲಿದೆ. ಪಲ್ಲಕ್ಕಿ ರಥೋತ್ಸವ ಸಂಪ್ರದಾಯ ಇಲ್ಲಿಲ್ಲ. ಉತ್ಸವ ತುಂಬಾ ಸರಳ ರೀತಿಯಲ್ಲಿ ಜರುಗುತ್ತದೆ.

### ೩ : ೧) (೮) ಮೌನಿಶ್ರೀಗಳ ಉತ್ಸವ :

ಸಮಾಜ ಉದ್ಧಾರಕ್ಕಾಗಿ ಮಹಾತ್ಮರು ಜನಿಸಿ ಜನಸಾಮಾನ್ಯರಿಗೆ ಉದ್ಧಾರ ಮಾಡಿದ ಅನೇಕ ಉದಾಹರಣೆಗಳಿವೆ. ಅಂಥ ಮಹಾನುಭಾವರ ಗುಂಪಿಗೆ ಸೇರಿದ ಮೌನಿ ಮಹಾರಾಜರೊಬ್ಬರು ಬೀದರ ನಗರದ ನರಸಿಂಹ ಝರಿಯ ಹತ್ತಿರ ಗವಿಯನ್ನು ಕೊರೆದು, ತಪಸ್ಸು ಮಾಡಿ ಸಿದ್ಧಿಗೈದ ಪವಾಡ ಪುರುಷರು ೧೯೮೭ರಲ್ಲಿ ಶಿವನ ಸನ್ನಧಿ ಸೇರಿದರು.

ಪ್ರತಿವರ್ಷ ಆಗಸ್ಟ್ – ಸೆಪ್ಟೆಂಬರ ತಿಂಗಳಲ್ಲಿ ಮೂರು ದಿನ ಉತ್ಸವ ಜರುಗುತ್ತದೆ. ಉತ್ಸವದ ದಿನಗಳಲ್ಲಿ ಮೌನಿಶ್ರೀಗಳ ಪ್ರತಿನಿತ್ಯ ಗದ್ದುಗೆಗೆ ಪೂಜೆ, ತೆಂಗು, ಕಾಯಿ, ಕರ್ಪೂರ, ಹೂಗಳ ಅರ್ಪಣೆ ಉಪನ್ಯಾಸ, ಪ್ರವಚನ, ಕೀರ್ತನೆ, ಅಭಿಷೇಕ ಅಖಂಡ ಶಿವನಾಮ ಭಜನೆ ಮುಂತಾದವುಗಳು ನಡೆಯುತ್ತವೆ. ಉತ್ಸವದ ಕೊನೆಯ ದಿನ ಬೆಳಗಿನ ಸಮಯ ಮಹಾಪ್ರಸಾದದ ವಿನಿಯೋಗ ಮಾಡುತ್ತಾರೆ. ಸುರ್-ಸುರ್ ಎಂದು ಸುರಿಯುವ ಪ್ರಸಾದ ಪಾಯಸವು ಘಮ ಘಮಿಸುತ್ತದೆ. ಈ ಉತ್ಸವದಲ್ಲಿ ಐದನೂರಕ್ಕೂ ಹೆಚ್ಚು ಜನ ಸೇರುವುದಿಲ್ಲ. ಸ್ಥಳೀಯ ಭಕ್ತರು ಮಾತ್ರ ಬಂದು ದರ್ಶನ ಪಡೆದುಕೊಳ್ಳುತ್ತಾರೆ.

೩ : ೧)　　　(೯) ಕ್ರೈಸ್ತರ ವಾರ್ಷಿಕ ಉತ್ಸವ :

ಕ್ರಿಸ್ತನು ಡಿಸೆಂಬರ ೨೫ರಂದು ಬೆತ್ಲಹೇಮಿನಲ್ಲಿ ಜನಿಸಿದನೆಂಬ ಸಾಂಪ್ರದಾಯಿಕ ನಂಬಿಕೆಯಂತೆ, ಅಂದು ಎಲ್ಲಾ ದೇಶಗಳ ಕ್ರೈಸ್ತಮತೀಯರು ಆಚರಿಸುವ ಕ್ರಿಸ್ತನ ಜನ್ಮದಿನೋತ್ಸವ ದಿನ ಬೀದರ ನಗರದಲ್ಲಿಯೂ ಸಹ ಆಚರಿಸುತ್ತಾರೆ. ಕ್ರಿಸ್ ಮಸ್ ಎಂಬುದು ಕ್ರೈಸ್ತನು (ಎಂದರೆ ಕ್ರಿಸ್ತತನಿಗೆ ಸಂಬಂಧಿಸಿದ ಆರಾಧನೆ ಹಬ್ಬ) ಎಂಬುದರ ಸಂಕ್ಷಿಪ್ತ ರೂಪ. ಕ್ರಿ.ಶ. ನಾಲ್ಕನೆಯ ಶತಮಾನದ ಉತ್ತರಾರ್ಧದಿಂದ ಈ ಉತ್ಸವ ಅಸ್ತಿತ್ವಕ್ಕೆ ಬಂದಿದೆ ಎನ್ನಲಾಗಿದೆ.

ರೋಮನ್ ಕೆಥೋಲಿಕರು ಜನವರಿ ೬ರಂದು ಆಚರಿಸುತ್ತಿದ್ದ ಸೂರ್ಯನ ಹಬ್ಬವಾದ ಎಲೆಫಿನಿಯಾ ಕ್ರಿಸ್ತ ಹಬ್ಬವಾದ ಜನನವನ್ನು ಸ್ಮರಣೆ ತರುವಂಥ ಹಬ್ಬವಾಗಿತ್ತು.

ಈ ಹಬ್ಬವನ್ನು ಆಚರಿಸಲಿಕ್ಕೆ ಪೌರಸ್ಥರು ಒಂದು ತಾರೀಖನ್ನು ಪಾಶ್ಚಾತ್ಯರು ಒಂದು ತಾರೀಖನ್ನು ಗೊತ್ತು ಮಾಡಿದುದರಿಂದ ಎರಡು ಭಿನ್ನ ದಿನಗಳಲ್ಲಿ ಈ ಹಬ್ಬವನ್ನು ಆಚರಿಸುವಂತಾಯಿತು. ಮುಂದೆ ಕ್ರಮೇಣ ಡಿಸೆಂಬರ ೨೫ರಂದೇ ಎಲ್ಲ ದೇಶಗಳಲ್ಲೂ ಆಚರಣೆಗೆ ಬಂತು. ಕ್ರಿಸ್ತ ಹುಟ್ಟಿದ ತಾರೀಖಿನ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಕ್ರಿ.ಶ. ೩೩೬ಕ್ಕಿಂತ ಮುಂಚೆ ರೋಮಿನ ಕ್ರೈಸ್ತೇತರು (ಪೇಗನ್ಸ) ಡಿಸೆಂಬರ ೨೫ರಂದು ಸೂರ್ಯನ ಹಬ್ಬವನ್ನು ಆಚರಿಸುತ್ತಿದ್ದರು. ಅದೇ ದಿನವನ್ನು ಕ್ರಿಸ್ಮಸ್ ಹಬ್ಬವನ್ನಾಗಿ ಗೊತ್ತು ಮಾಡಿರಬಹುದೆಂದು ಇನ್ನೊಂದು ಊಹೆ. ಡಿಸೆಂಬರ ೨೫ರಂದು ಜನ್ಮ ದಿನೋತ್ಸದಂದು ಚರ್ಚಗಳಲ್ಲಿ ಮೂರು ಆರಾಧನೆ ನಡೆಯುತ್ತವೆ. ಮೊದಲನೆಯದು ರಾತ್ರಿ ೧೨ ಗಂಟೆಗೆ, ಎರಡನೆಯದು ಬೆಳಿಗ್ಗೆ ಮೂರನೆಯದು ಮಧ್ಯಾಹ್ನ ಜನ ಚರ್ಚುಗಳಲ್ಲಿ ಕ್ರಿಸ್ಮಸ್ ಹಬ್ಬದ ಕೀರ್ತನೆಗಳನ್ನು (ಕರೋಲ್ಸ) ಹಾಡಿಕೊಂಡು ನಲಿಯುತ್ತಾರೆ.

ಸಾಮಾನ್ಯವಾಗಿ ಈ ಹಬ್ಬದ ಉತ್ಸವವನ್ನು ಹೊಸ ವರ್ಷದ ಮೊದಲ ದಿನದವರೆಗೂ ಅಂದರೆ ಜನೆವರಿ ಒಂದರವರೆಗೂ ಕಾಣಬಹುದಾಗಿದೆ. ಉತ್ಸವದಂದು ಅನೇಕ ರೀತಿಯ ಪದ್ಧತಿಗಳು ರೂಡಿಗೆ ಬಂದಿವೆ. ಆ ದಿನ ಪ್ರತಿಯೊಬ್ಬರು ತಮ್ಮ ತಮ್ಮ ಗೃಹಗಳನ್ನು ಮನ ಮೆಚ್ಚುವಂತೆ ಅಲಂಕರಿಸುತ್ತಾರೆ. ಅಂದು ಸ್ತ್ರೀ–ಪುರುಷರು ಮಕ್ಕಳಾದಿಯಾಗಿ ಶುಭ್ರವಸ್ತ್ರಧಾರಿಗಳಾಗಿ ಚರ್ಚಿಗೆ ಹೋಗಿ ಕರ್ತನಿಗೆ ಪ್ರಾರ್ಥನೆಯನ್ನು ಸಲ್ಲಿಸಿ, ಭಕ್ಷ್ಯ ಭೋಜ್ಯ ತಿಂಡಿ ತಿನುಸುಗಳನ್ನು ತಿಂದುಂಡು ಸಂತೋಷವಾಗಿರುತ್ತಾರೆ. ಬಡ–ಬಗ್ಗರಿಗೆ ಅನ್ನ ತಿಂಡಿ ವಸ್ತ್ರಾದಿಗಳನ್ನು ದಾನಮಾಡುವುದು ರೂಢಿಯಲ್ಲಿದೆ. ಉಳ್ಳವರು ಈ ದಿನದಂದು ತಮ್ಮ ಪ್ರೀತಿ ಪಾತ್ರರಿಗೆ ಬೆಲೆ ಬಾಳುವ ಪದಾರ್ಥಗಳನ್ನು ಉಡುಗೊರೆಯಾಗಿ ಕೊಡುತ್ತಾರೆ.

ದೂರದಲ್ಲಿರುವ ತಮ್ಮ ಆಪ್ತರು ಆತ್ಮೀಯರಿಗೆ ಶುಭಕಾಂಕ್ಷೆ ಪತ್ರಗಳನ್ನು ಬರೆದು ಶುಭ ಕೋರುವುದು ಸರ್ವೆ ಸಾಮಾನ್ಯವಾಗಿದೆ. ಕ್ರಿಸ್‌ಮಸ್ ಗಿಡವನ್ನು ನಿರ್ಮಿಸಿ ಅದನ್ನು ಕಾಗದದ ಹೂ ಮತ್ತು ದೀಪಗಳಿಂದ ಅಲಂಕರಿಸುತ್ತಾರೆ. ಸಂಜೆ ಹೊತ್ತಿನಲ್ಲಿ ಏಸುವಿನ ಪ್ರತಿಮೆಯನ್ನು ವಾಹನದಲ್ಲಿರಿಸಿ ಹೂ ಮತ್ತು ವಿದ್ಯುತ್ ಲೈಟುಗಳಿಂದ ಅಲಂಕರಿಸಿ ಮೆರವಣಿಗೆ ಮಾಡುತ್ತಾರೆ. ಮೆರವಣಿಗೆ ಕುಣಿತ, ಮಣಿತ, ಭಜನೆ ಮುಂತಾದವುಗಳಿಂದ ಒಳಗೊಂಡಿರುತ್ತದೆ. ಸಾವಿರಾರು

ಜನರು ಮೆರವಣಿಗೆಯಲ್ಲಿ ಸೇರುತ್ತಾರೆ. ಜನಪದ ಗೀತೆ, ಹಾಡುವುದು ಕೋಲಾಟ ಆಡುವುದು, ಮುಂತಾದ ಮನೋರಂಜನೆ ಕಾರ್ಯಕ್ರಮಗಳಿರುವುದು ಈ ಉತ್ಸವದ ವೈಶಿಷ್ಟ್ಯ ಬಾಣ ಬಿರುಸು, ಸುಡು ಮದ್ದುಗಳನ್ನು ಸುಡುತ್ತಾರೆ. ಇಲ್ಲಿ ಜಾತಿ ಭೇದವಿರುವುದಿಲ್ಲ. ಪ್ರತಿಯೊಬ್ಬರು ತಮ್ಮ ಕುಂದು ಕೊರತೆಗಳನ್ನು ಬೇಕು ಬೇಡಗಳನ್ನು ದೇವರ ಮುಂದೆ ನಿವೇದಿಸುವುದು ಸಾಮಾನ್ಯ ವಿಷಯವಾಗಿದೆ.

೩ : ೧) (೧೦) ಮುಲ್ತಾನಿ ಪಾಶಾ ಉರುಸ್ :

ಬೀದರ ನಗರದಲ್ಲಿ ನಡೆಯುವ ಇಸ್ಲಾಂರ ದೇವರೋತ್ಸವದಲ್ಲಿ ಮುಲ್ತಾನಿ ಪಾಶಾ ಉರುಸ್ ಪ್ರಮುಖವಾಗಿದೆ. ರಂಜಾನ ತಿಂಗಳು ಪ್ರಾರಂಭವಾದೊಡನೆ ನರಕದ ಬಾಗಿಲುಗಳನ್ನು ಮುಚ್ಚಿ ಸ್ವರ್ಗದ ಬಾಗಿಲುಗಳನ್ನು ತೆರೆದಿಡುತ್ತದೆಯಂತೆ. ಈ ತಿಂಗಳಲ್ಲಿ ಖುರಾನ್ ಧರ್ಮ ಗ್ರಂಥದ ಮಹತ್ವವನ್ನು ಪ್ರಚಾರಪಡಿಸುವದು ಪೂಜಿಸುವುದ, ಇಸ್ಲಾಂನ ಧರ್ಮಕ್ಕಾಗಿ ದುಡಿದ ಮಹಾಯೋಗಿ ತ್ಯಾಗಿಗಳ ಸವಿನೆನಪಿಗಾಗಿ ಉರುಸ್ ಗಳು ನಡೆಸುವುದು ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಡುಸುವದು ಬೀದರ ಜಿಲ್ಲೆಯ ಮುಸ್ಲಿಂ ಬಾಂಧವರು ಆಯಾ ಗ್ರಾಮ ತಾಲ್ಲೂಕ ಜಿಲ್ಲೆಯಲ್ಲಿ ನಡೆಸುತ್ತಾರೆ.

ಬೀದರ ನಗರದಲ್ಲಿರುವ ಮುಲ್ತಾನಿಪಾಶಾ ಉರುಸ್ ಪ್ರತಿವರ್ಷ ರಂಜಾನ ಹಬ್ಬದಂದು ಪ್ರಾರಂಭವಾಗಿ ಐದು ದಿನಗಳ ಕಾಲ ಜರುಗುತ್ತದೆ. ಇದು ಹಿಂದೂ-ಮುಸ್ಲಿಂ ಜನರ ಭಾವೈಕ್ಯದ ಸಂಕೇತವೆನಿಸಿದೆ. ಬೀದರ ಪಟ್ಟಣದವನೇ ಆದ ಮುಸ್ಲಿಂ ಸಂತ ಮುಲ್ತಾನಿ ಪಾಶಾ ಪವಾಡ ಪುರಷರಾಗಿ ಖುರಾನ ಧರ್ಮಗ್ರಂಥದ ಪ್ರಚಾರ ಸದಾ ಅಲ್ಲಾಹಃ ಶಿವನಾಮ ಸ್ಮರಣೆ ಮಾಡುವದೊಂದಿಗೆ ಈ ಭಾಗದ ಜನರ ಆರಾಧ್ಯ ದೈವವಾಗಿದ್ದಾರೆ. ಮುಲ್ತಾನ ಪಾಶಾರ ಕಾಲ ೧೮ನೇ ಶತಮಾನ ಎಂದು ಹೇಳಲಾಗುತ್ತಿದೆ. ನಿಖರವಾದ ಪುರಾವೆಗಳು ದೊರೆತಿಲ್ಲ. ಸಂತ ಪಾಶಾ ಮರಣಾಂತರ ಸ್ಥಳೀಯ ಭಕ್ತ ಮುಸ್ಲಿಂ ಬಾಂಧವರು ಗೋರಿಯ ಮೇಲೆ ಭವ್ಯ ದರ್ಗಾ ಕಟ್ಟಿಸಿ ಪ್ರತಿವರ್ಷ ರಂಜಾನ ಹಬ್ಬದಂದು ಐದು ದಿವಸ ಉರುಸ್ ನಡೆಸುವ ಪರಿಪಾಠ ಬೆಳೆಸಿಕೊಂಡು ಬಂದಿದ್ದಾರೆ.

ದರ್ಗಾದ ತುಂಬೆಲ್ಲಾ ಚಿಕ್ಕ ಚಿಕ್ಕ ವಿದ್ಯುತ್ ದ್ವೀಪಗಳಿಂದ ಅಲಂಕರಿಸುತ್ತಾರೆ. ಜಾತಿ-ಮತ ಭೇದವಿಲ್ಲದೆ ಜನ ಸೇರುತ್ತಾರೆ. ಮುಲ್ತಾನಿ ಪಾಶಾರವರ ಪ್ರೀತಿಯ "ಸಮಾ" ಭಜನಾ ಮೇಳಗಳು ಏರ್ಪಡುತ್ತವೆ. ಪರಮಾತ್ಮನ ಹಾಗೂ ಸಂತರ ಗುಣಗಾನದ ಕವ್ವಾಲಿ ಗಜಲ್ ಗಳ ಸುಗ್ಗಿಯನ್ನು ಕಾಣಬಹುದು. ಹಿಂದೂ ಮುಸ್ಲಿಂರು ಭೇದಭಾವವಿಲ್ಲದ ಮುಲ್ತಾನಿ ಪಾಶಾ ಸಂತನ ದರ್ಶನ ಪಡೆಯುತ್ತಾರೆ. ಹಿಂದೂಗಳಾದವರು ಮಿಠಾಯಿ ಹಂಚಿದರೆ, ಮುಸ್ಲಿಂರು ಹರಕೆಯ ಅನ್ವಯ "ಸುರುಕುಂಬಾ" ಅರ್ಪಣೆ ಮಾಡುತ್ತಾರೆ. ಅರ್ಚಕರು ನವಿಲಿನ ಗರಿಗಳಿಂದ ಆರ್ಶೀವಾದ ಕೊಡುತ್ತಾರೆ.

ಪುಷ್ಪಗುಚ್ಛ ಏರಿಸುವ ಸಂದರ್ಭ ಕಣ್ಣಾರೆ ಕಂಡು ಆನಂದಿಸಬಹುದಾಗಿದೆ. ಉರುಸ್ ಸಮಯದಲ್ಲಿ ನೂರಾರು ಹಂಗಾಮಿ ಅಂಗಡಿಗಳು ತಲೆ ಎತ್ತುತ್ತವೆ. ಮನೋರಂಜನೆಗಾಗಿ ಚಕ್ರದ ತೊಟ್ಟಿಲು, ಕುದರೆ ಮೇಲೆ ಕೂಡುವ ತೊಟ್ಟಿಲು, ವಿಮಾನ ತೊಟ್ಟಿಲು ಹೀಗೆ ಹತ್ತಾರು ಪ್ರಕಾರದ ಮನೋರಂಜನೆ ವ್ಯವಸ್ಥೆ ಇರುತ್ತದೆ. ಉರುಸ್ ಕೊನೆಯ ದಿವಸ ದರ್ಗಾದಲ್ಲಿ ಉಪನ್ಯಾಸ ಹಾಗೂ ಖಾಂಡ (ಊಟದ) ವ್ಯವಸ್ಥೆ ಮಾಡಿರುತ್ತಾರೆ. ಅಂದು ಮುಂಜಾನೆ ಮುಸ್ಲಿಂರು ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿ ಪುರುಷರು ಸಡಗರ ಸಂಭ್ರಮದಿಂದ ದರ್ಗಾಕ್ಕೆ ಬರುತ್ತಾರೆ. ಸಂತ ಮುಲ್ತಾನಿ ಪಾಶಾನ ದರ್ಶನ ಕಪಡೆದು ಪ್ರಸಾದ ಸ್ವೀಕರಿಸುತ್ತಾರೆ. ನಂತರ ಒಬ್ಬರಿಗೊಬ್ಬರು ಹರ್ಷೋದ್ಗಾರದಿಂದ ಕೈಕೂಡಿಸಿ ಸಹೋದರ ಭಾವದಿಂದ ಆಲಂಗಿಸುವರು. ಉರುಸು ಮತ್ತು ಹಬ್ಬದ ಮುಬಾರಕ್ ಎನ್ನುತ್ತ ಶುಭ ಕೋರುವರು.

ಈ ಸಂದರ್ಭದಲ್ಲಿ ಹಿಂದೂ–ಮುಸ್ಲಿಂ, ಬಡವ ಸಿರಿವಂತ, ಶತೃ–ಮಿತ್ರ ಪರಿಚಿತ ಅಪರಿಚಿತ ಎಂಬ ಭೇದ ಭಾವ ಮಾಡದೆ ಎಲ್ಲರೂ ಸಹೋದರರು ಎಂಬ ಭಾವನೆಯು ಉಂಟಾಗುವದು. ಉರುಸ್ ಮುಗಿಸಿಕೊಂಡು ತಮ್ಮ ತಮ್ಮ ಮನೆಗೆ ಹೋದ ಮೇಲೆ "ಫೀರ್ ಕುರಮಾ" ಎಂಬ ಸಿಹಿ ಅಡಿಗೆಯನ್ನು ಮಾಡಿ ಮತ ಭೇದವಿಲ್ಲದೆ ಬಂದು ಮಿತ್ರರನ್ನು ಆಮಂತ್ರಿಸಿ, ಆಲಿಂಗಿಸಿ ಶುಭ ಕೋರುತ್ತಾರೆ. ಮುಲ್ತಾನಿ ಪಾಶಾ ಉರುಸು ರಂಜಾನ ತಿಂಗಳ ಕೊನೆಯ ತನಕ ಮತೀಯ ಸೌಹಾರ್ದತೆಗೆ ರಾಷ್ಟ್ರೀಯ ಭಾವೈಕ್ಯತೆಗೆ ಮಾದರಿಯಾಗಿದೆ.

ಮನುಷ್ಯರ ನಡುವಿನ ಸಂಬಂಧವನ್ನು ಒಂದುಗೂಡಿಸಲು ಪ್ರೇರೆಪಿಸುವ ರೀತಿಯಲ್ಲಿ ಮುಲ್ತಾನಿ ಪಾಶಾ ಉರುಸ್ ಒಂದಾಗಿದೆ.

## ೩ : ೧) (೧೧) ವಿಠಲನ ಉತ್ಸವ :

ಭಾರತ ದೇಶವು ಪುಣ್ಯ ಭೂಮಿ ಪುನೀತರ ಸ್ಥಾನ. ಅದು ಹೇಗೆ ಅದರ ನಿಜ ಹಿನ್ನಲೆ ಬೇಕಲ್ಲವೇ? ನಮ್ಮ ಜನತೆಯ ಐಹಿಕ ಬಾಹ್ಯಕತೆ ಸಾಧಿಸಿ ನಿಸ್ವಾರ್ಥ ನಿಷ್ಕಾಮ ವೃತ್ತಿಯನ್ನು ಬೇರೂರಿಸಿ 'ತ್ಯಮೇವ ಜಯತೇ' ಎಂಬ ತಾತ್ವಿಕ ವೇದ ಬೋಧ ಸುವಿಚಾರ ಸುಧಾ ಸೂಕ್ತಿಗಳನ್ನು ಜನತೆಯ ಹೃತ್ಪಟಲ ಮೇಲೆ ಅಚ್ಚಳಿಯದೇ ಬಿಂಬಿಸಿ ವಿಶ್ವಶಾಂತಿ ಸಾಧಿಸುವುದೇ ಮಾನವ ಧರ್ಮ ಅಂಥವರಲ್ಲಿ ವಿಠಲನೊಬ್ಬನು.

ಮಹಾರಾಷ್ಟ್ರದ ಪಂಡವಪುರದ ಪ್ರಮುಖ ದೇವರು ವಿಠಲ. ಪಂಡರಪುರದ ಪ್ರಮುಖ ದೇವತೆಯಾಗಿರುವ ವಿಠಲನಿಗೆ ಬೀದರಿನ ಜನರು ಪಂಡರಿನಾಥ, ಪಾಂಡುರಂಗ ಎನ್ನುವ ಹೆಸರುಗಳಿಂದ ಕರೆಯುತ್ತಾರೆ. ವಿಠಲನ ಉತ್ಸವ ಬದಲಾಗಿ ಪಾಂಡುರಂಗನ ಉತ್ಸವ ಎನ್ನುತ್ತಾರೆ. ವಿಷ್ಣುವಿನ ಅವತಾರ ಇವನಿಗಿದೆ. ಈ ದೇವರ ಸ್ಮರಣಾರ್ಥವಾಗಿ ಬೀದರ ನಗರದ ಕೇಂದ್ರ ಸ್ಥಳದಲ್ಲಿ ವಿಠಲ ದೇವರ ಮೂರ್ತಿ ಸ್ಥಾಪಿಸಿ ದೇವಾಲಯವನ್ನು ಕಟ್ಟಿಸಿದ್ದಾರೆ. ಪ್ರತಿವರ್ಷ ಆಷಾಡ ಪೌರ್ಣಿಮೆಯಂದು ಮೂರು ದಿನಗಳ ಕಾಲ ಉತ್ಸವ ಜರುಗುತ್ತದೆ. ಉತ್ಸವದ ಪ್ರಥಮ ದಿನದಂದು ವಿಠಲನ ಮೂರ್ತಿಗೆ ಹಾಲಿನಿಂದ ಅಭಿಷೇಕ ಪೂಜೆ

ನಡೆಯುತ್ತದೆ. ಸಂಜೆ ಹೊತ್ತಿಗೆ ಹೆಣ್ಣುಮಕ್ಕಳು ಪಂಡರಿ ಭಜನೆ ಮಾಡುವರು. ಪ್ರತಿಯೊಬ್ಬ ಮಹಿಳೆ ತಾಳ ಹಿಡಿದುಕೊಂಡು ವಿಠಲನ ಕುರಿತಾಗಿದ್ದ ಹಾಡುಗಳೇ ಹಾಡುವರು. ಮರುದಿನ ಖಾಂಡ ಪಲ್ಲಕ್ಕಿ ಉತ್ಸವವಿರುತ್ತದೆ. ಕೊನೆಯ ದಿನ ದಿಂಡಿ ಮೆರವಣಿಗೆ ದಿಂಡಿಯೆಂದರೆ ಭಜನೆಯ ಮೇಳ ದೇವಾಲಯದ ಒಳಭಾಗದಲ್ಲಿ ಭಜನೆಯೊಂದಿಗೆ ಎಳೆಯುವ ಚಿಕ್ಕ ತೇರು ಸಣ್ಣ ಉತ್ಸವ ಎಂದರ್ಥ (ವೆಂಕಟ ಸುಬ್ಬಯ್ಯ : ೧೯೭೯:೩೮:೯) ವಿಠಲನ ದೇವಾಲಯದ ಪೂಜಾರಿ ಸಣ್ಣ ಗಡಿಗೆಯ ತುಂಬ ಮೊಸರು ಹಾಕಿ ಅದಕ್ಕೆ ಪೂಜಿಸಿ ಅಲಂಕರಿಸುಕೊಂಡು ತನ್ನ ತಲೆಯ ಮೇಲೆ ಇಟ್ಟುಕೊಂಡು ದಿಂಡಿ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಾನೆ.. ದಿಂಡಿ ಮೆರವಣಿಗೆ ಬೀದರ ನಗರದ ಶಾಹಗಂಜ ಕಮಾನಿನವರೆಗೆ ಬಂದು ನಿಲ್ಲುತ್ತದೆ. ಕಮಾನಿನ ಮೇಲೆ ನಿಂತು ಪೂಜಾರಿ ಮೊಸರು ಗಡಿಗೆ ಒಡಿಯುತ್ತಾನೆ. ಸೋರುವ ಮೊಸರು ಕುಡಿಯಬೇಕೆಂಬ, ಹಂಬಲದಿಂದ ಕೆಳಗೆ ನಿಂತ ಭಕ್ತರು ನಾಮುಂದು ತಾಮುಂದು ಎಂದು ನೂಕು ನುಕಗ್ಗಲುಗೊಳ್ಳುತ್ತಾರೆ. ಮೊಸರು ಗಡಿಗೆ ಒಡಿಯುವ ಸಂಪ್ರದಾಯವೆಂದರೆ ಎಲ್ಲರೂ ಮೊಸರಿನಂತೆ ಸುಖದ ಜೀವನ ಆಗಲೆಂಬುದೇ ಆಗಿದೆ.

ವಿಠಲ ದೇವರೋತ್ಸವಕ್ಕೆ ಬಂದವರು ಟೆಂಗು, ಕಾಯಿ, ಕರ್ಪೂರ ವಿಠಲನಿಗೆ ಅರ್ಪಿಸುತ್ತಾರೆ. ಪೋಲಿಸ್ ವ್ಯವಸ್ಥೆ ಬಂದೋ ಬಸ್ತಾಗಿರುತ್ತದೆ. 'ದಿಂಡಿ' ಮೆರವಣಿಗೆಯಲ್ಲಿ ನಾನಾ ಹಳ್ಳಿಗಳಿಂದ ಬಂದ ಭಜನಾ ಮೇಳದವರು ಆಕರ್ಷಕವಾದ ಭಜನೆ ಮಾಡುತ್ತಾರೆ. ಧ್ವನಿ ವರ್ಧಕಗಳಲ್ಲಿ ಹಾಡು ಹೇಳುತ್ತಾರೆ. ಕುಣಿಯುತ್ತಾ ಭಜನೆ ಹಾಕುತ್ತಾರೆ. ಹಲಗೆ ಭಾರಿಸುವವರು ಹಲಗೆಯನ್ನು ಕಾಯಿಸಿ ಬಿಗಿ ಮಾಡಿ ಚಡ್–ಚಡ್ ನಕುನ್ ನಕುನ್ ಭಾರಿಸುವಾಗ ಕಂಚಿನ ಸ್ವರವೂ ಹೊರಹೊಮ್ಮುತ್ತದೆ. ಸುತ್ತ–ಮುತ್ತ ಇದ್ದ ಹುಡುಗರು ದೊಡ್ಡವರು ಕುಣಿಯ ತೊಡಗುತ್ತಾರೆ. ಎಲ್ಲರಿಗಿಂತಲೂ ಚೆಂದಾಗಿ ಹೆಜ್ಜೆ ಹಾಕಿ ಕುಣಿದವನ ಬಾಯಿಯಲ್ಲಿ ೫,೧೦,೨೦ ರೂಪಾಯಿಯ ನೋಟನ್ನು ಇಟ್ಟು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಮತ್ತೆ ಕುಣಿಯ ತೊಡಗುತ್ತಾರೆ. ಹಲಗೆಯ ಕುಣಿತ ರಂಗೇರಿದಂತೆ ಉತ್ಸವಕ್ಕೆ ವಿಭಿನ್ನವಾದ ಕಳೆ ಬರುತ್ತದೆ. ಉತ್ಸವದಲ್ಲಿ ಬ್ರಾಹ್ಮಣ, ಕೋಮಟಿ ವರ್ಗದವರೇ ಹೆಚ್ಚಾಗಿರುತ್ತಾರೆ. ತಿನ್ನಲು ಜಾಮೂನ್ ಚಂದ, ವಿಠಲನ ಉತ್ಸವ ನೋಡಲು ಪಸಂದ ಎನ್ನುವ ಗಾದೇ ಈ ಉತ್ಸವದ ಕುರಿತಾಗಿದೆ.

೩ : ೧) (೧೨) ಭದ್ರೇಶ್ವರ ಉತ್ಸವ :

ಭದ್ರೇಶ್ವರರು ಕ್ರಿ.ಶ. ೧೭೬೨ ರಿಂದ ೧೮೩೨ರವರೆಗೆ ಜೀವಿಸಿದರು. ಇವರು ಬೀದರ ಜಿಲ್ಲೆಯ ಹುಮನಾಬಾದ ತಾಲ್ಲೂಕಿನ ನಿಡವಂಚ ಗ್ರಾಮದವರು. ದೀನ ದಲಿತರ ದುಃಖಿತರ ಕಷ್ಟ ತಾಪತ್ರಯಗಳನ್ನು ದೂ ಮಾಡಿದ ದಯಾಮಯಿಗಳು. ಅಂಗದ ಮೇಲೆ ಲಿಂಗಧರಿಸಿ ಷಟಸ್ಥಲಮಾರ್ಗಿಗಳಾಗಿ ಅಂಗಾಂಗ ಸಾಮರಸ್ಯದ ಸಿದ್ಧಿ ಪಡೆದುಕೊಂಡ ಮಹಾಮಹಿಮಾ ಶಿವಯೋಗಿಗಳು., ಜನ ಬದುಕಿ ನೀತಿವಂತರಾಗಬೇಕು, ಸಚ್ಚಾರಿತ್ರ್ಯಶೀಲರಾಗಿ ಮುಕ್ತಿ

ಪಡೆಯಬೇಕೆಂದು ಜನ ಸಾಮಾನ್ಯರಿಗೆ ತಿಳಿಸಿ ನೂರಾರು ಅನುಭವ ಪದಗಳು ರಚಿಸಿ ೧೮೩೨ರಲ್ಲಿ ಶಿವನಲ್ಲಿ ಲೀನರಾದರು.

ಮಠ ಎಂದ ಮೇಲೆ ಅದಕೊಬ್ಬ ಮಠಾಧೀಶರು ಬೇಕು. ಗುರುಭದ್ರೇಶ್ವರ ತರುವಾಯ ಅವರ ಶಿಷ್ಯತ್ವ ವಹಿಸಿದ ದೋಪಾನ ಪಳ್ಳಿಯ ಬುದ್ಧಯ್ಯ ಇವರಾದ ಮೇಲೆ ನಿಡವಂಚ ಭೀಮರಾಯ ಪಾಟೀಲರು ಇದೀಗ ಶ್ರೀ ಚನ್ನಮಲ್ಲೇಶ್ವರ ತ್ಯಾಗಿ ಗುರುಭದ್ರೇಶ್ವರ ಮಠದ ಪೀಠಾಧೀಪತಿಗಳಾಗಿದ್ದಾರೆ. ಲಿಂಗೈಕ್ಯ ಭದ್ರೇಶ್ವರ ಸ್ಮರಣಾರ್ಥ ಪ್ರತಿವರ್ಷ ಮಾರ್ಚ ಏಪ್ರಿಲ್ ತಿಂಗಳಲ್ಲಿ ನಾಲ್ಕುದಿನ ಭದ್ರೇಶ್ವರ ಶಿವಯೋಗಿಗಳ ಮಹೋತ್ಸವ ನಡೆಸುತ್ತಾರೆ.

ಉತ್ಸವ ಪ್ರಾರಂಭವಾದ ದಿವಸ ಷಟಸ್ಥಲ ಧ್ವಜಾರೋಹಣ ಬಸವಜ್ಯೋತಿ ಬೆಳಗಿಸುವುದ ಮುಂತಾದ ಕಾರ್ಯಗಳು ಜರುಗುತ್ತವೆ. ಸಂಜೆ ಹೊತ್ತಿಗೆ ಭದ್ರೇಶ್ವರ ಕರ್ತೃಗದ್ದುಗೆಗೆ ರುದ್ರಾಭಿಷೇಕ ರಾತ್ರಿ ಸಾಮೂಹಿಕ ಲಿಂಗ ಪೂಜೆ ಗೀಗೀ ಪದಗಳ ಗಾಯನ ನಡೆಯುತ್ತದೆ. ಮರುದಿನ ಮುಂಜಾನೆ ನವಗೃಹಶನೇಶ್ವರ ಕರ್ತೃಗದ್ದುಗೆಗೆ ರುದ್ರಾಭಿಷೇಕ ವಿದ್ವಾಂಸರಿಂದ ಉಪನ್ಯಾಸ ಆನಂತರ ಭಜನೆ ದಿಂಡಿಗಳ ಆಗಮನ, ಭರ್ಜರಿ ಭಜನೆ ಒಂದೆಡೆಯಾದರೆ, ಇನ್ನೊಂದೆಡೆ ಬೃಹತ ಪ್ರಮಾಣದ ದನಗಳ ಜಾತ್ರೆ ಇರುತ್ತದೆ. ಉತ್ತಮ ದನಕರುಗಳಿಗೆ ಸೂಕ್ತ ಬಹುಮಾನ ಕೊಡುವ ಪರಂಪರೆ ಇಲ್ಲಿದೆ.

ಉತ್ಸವದ ಮೂರನೆಯ ದಿನ ಕೃರ್ತ ಗದ್ದುಗೆಗೆ ರಾಚೋಟೇಶ್ವರ, ಶಂಕರ ಲಿಂಗೇಶ್ವರ, ನಾಗಲಿಂಗೇಶ್ವರ, ಶನೇಶ್ವರ, ನವಗ್ರಹ ಆಂಜನೇಯ, ಪಾಂಡುರಂಗ, ರುಕ್ಮೀಣಿ ಹತ್ತುಗಳಿಗೆ ರುದ್ರಾಭಿಷೇಕ ಪೂಜೆ ಮಾಡುತ್ತಾರೆ. ಕುಂಭಮೇಳ ನಡೆಸುತ್ತಾರೆ. ಸಂಜೆ ರಥೋತ್ಸವ ಹಾಗೂ ಪಲ್ಲಕ್ಕಿ ಪೂಜೆಯಾದ ಮೇಲೆ ಮುತ್ತೈದೆಯರಿಂದ ಕೊಡದಲ್ಲಿ ಕುಂಭತರುವ ವಿಶಿಷ್ಟ ಪದ್ಧತಿ ಇಲ್ಲಿದೆ. ಕೊನೆಯ ದಿನ ಶಿವಭಜನೆ ಭದ್ರೇಶ್ವರ ಶಿವಯೋಗಿಗಳು ರಚಿಸಿದ ಅನುಭವ ಪದಗಳ ಗಾಯನ ಇರುತ್ತದೆ. ಇದಾದ ನಂತರ ಭಕ್ತರು ಕೊಟ್ಟ ಧನ ಧಾನ್ಯಗಳ ಸಹಾಯದಿಂದ ಖಾಂಡ ಮಾಡುವರು. ಉತ್ಸವಕ್ಕೆ ಬಂದ ಭಕ್ತರೆಲ್ಲರೂ ತಪ್ಪದೇ ಪ್ರಸಾದ ಸ್ವೀಕರಿಸುತ್ತಾರೆ. ಭದ್ರೇಶ್ವರ ಕುರಿತು ಜಯಘೋಷಗಳು ಮೊಳಗುತ್ತವೆ. ಉತ್ಸವದ ಸಂದರ್ಭದಲ್ಲಿ ಹುಮನಾಬಾದ ತಾಲ್ಲೂಕಿನಿಂದ ದಿನದಲ್ಲಿ ನಾಲ್ಕು ಸಲ ಬಸ್ಸು ಬಂದು ಹೋಗುವ ವಿಶೇಷ ಸೌಕರ್ಯ ಇರುತ್ತದೆ. ಬೀದರ ಜಿಲ್ಲೆಯ ಸುತ್ತ ಮುತ್ತಲಿನ ಸಾಧು ಸಂನ್ಯಾಸಿಗಳು ಈ ಉತ್ಸವದಲ್ಲಿ ಭಾಗವಹಿಸುತ್ತಾರೆ.

೩ : ೧)    (೧೩) ಬಸವಣ್ಣನ ಉತ್ಸವ :

ಬಸವಕಲ್ಯಾಣದಲ್ಲಿ ಪ್ರತಿವರ್ಷ ಜರುಗುವ ಬಸವಣ್ಣನ ಉತ್ಸವ ಬೀದರ ಜಿಲ್ಲೆಯಲ್ಲಿ ನಡೆಯುವ ಉತ್ಸವಗಳಲ್ಲಿ ಅತಿ ದೊಡ್ಡದು ಮತ್ತು ಅತಿ ಪ್ರಮುಖವೂ ಆಗಿದೆ.

ಬೀದರ ನಗರದಿಂದ ೮೦ ಕಿ.ಮೀ. ದೂರದಲ್ಲಿರುವ ಚಾರಿತ್ರಿಕ ಸ್ಥಳ ಬಸವಕಲ್ಯಾಣ. ಇದು ಒಂದು ತಾಲ್ಲೂಕು ಕೇಂದ್ರ.

ಸಮೃದ್ಧಿ ಅಧ್ಯಾತ್ಮಿಕತೆ ಹಾಗೂ ಸಹಿಷ್ಣುತೆಗೆ ಹೆಸರುವಾಸಿಯಾದ ಈ ನಗರವು ಚಾಳುಕ್ಯರ ಹಾಗೂ ಕಲಚೂರ್ಯರ ರಾಜಧಾನಿಯಾಗಿತ್ತು. ಬಹುಮನಿ ದಾಖಲೆಗಳಲ್ಲಿ ಇದನ್ನು ಕಸಬ ಕಲ್ಯಾಣಬಾದ್ ಎಂದು ಕರೆಯಲಾಗಿದೆ. ಬಸವಣ್ಣನವರ ಕ್ರಾಂತಿ ಆರಂಭವಾದ ಸ್ಥಳ ಇದು. ಇಲ್ಲಿ ಬಸವೇಶ್ವರ ದೇವಸ್ಥಾನ ಅನುಭವ ಮಂಟಪ, ಪ್ರಭುದೇವರ ಗದ್ದುಗೆ, ಅಕ್ಕನಾಗಮ್ಮ ಗವಿ, ಬಸವೇಶ್ವರ ಮಹಾಮನೆಯ ನಿವೇಶನ ಅರಿವಿನ ಗವಿ, ನುಲಿಯ ಚಂದಯ್ಯ ಗವಿ, ಘನಲಿಂಗ ರುದ್ರ ಮುನಿಯ ಗವಿ, ಮಡಿವಾಳ ಮಾಚಯ್ಯನ ಕೆರೆ (ತ್ರಿಪುರಾಂತಕ ಕೆರೆ) ಉರಿಲಿಂಗ ಪೆದ್ದಿಯ ಮಠ, ಮೊದಲಾದವು ಇಲ್ಲಿನ ಚಾರಿತ್ರಿಕ ಯಾತ್ರಾ ಸ್ಥಳದ ಮಹತ್ವವನ್ನು ಹಾಗೂ ವೀರಶೈವ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಕಲ್ಯಾಣದ ಚಾಲುಕ್ಯರು ನಿರ್ಮಿಸಿದ ಕೋಟೆಯನ್ನು ಇಂದಿಗೂ ಕಾಣಬಹುದು.

ಹನ್ನೆರಡನೆಯ ಶತಮಾನದಲ್ಲಿ ಸಮಗ್ರ ಕ್ರಾಂತಿಯ ಕಾರಣ ಪುರುಷ ಬಸವಣ್ಣನವರು. ಅವರು ಜೀವನ ಧ್ಯೇಯ ವಿಶ್ವವಿಶಾಲ, ತತ್ತ್ವದರ್ಶಿ, ಕಾರ್ಯಶೀಲ ಮಾನವೀಯ ಮೌಲ್ಯಗಳೇ ಅವರ ಜೀವನ ಸಿದ್ಧಾಂತ ಅವರೊಬ್ಬ ಮಹಾಕರಣಿಕ ವಿಭೂತಿ ಪುರುಷ. ಬಸವಣ್ಣನವರದು ಹಮ್ಮು ಬಿಮ್ಮುಗಳಿಲ್ಲದ ಭಕ್ತಿ ಮನಕ್ಕೆ ಮನಸಾಕ್ಷಿಯಾದ ಬದುಕು. ಸುತ್ತಣ ಬದುಕಿಗೆ ಸ್ಪಂದಿಸಿದ ಬಸವಣ್ಣನವರು ದಲಿತರಿಗೆ ದಾನಿಯಾಗಿದ್ದರು. ಶೋಷಕರಿಗೆ ಸ್ಥೂಲವಾಗಿದ್ದರು. ನೊಂದವರಿಗೆ ನೆರಳಾಗಿದ್ದರು. ಧರ್ಮದ ದೃಷ್ಟರಾಗಿ ಸ್ತ್ರೀ ಕುಲದ ಉದ್ಧಾರಕರಾಗಿ ಸಾಹಿತ್ಯದ ಸೆಲೆಯಾಗಿ, ಶೀಲದ ಸಂಪತ್ತಾಗಿ ಬಾಳಿದ ಬಸವಣ್ಣನವರು ವ್ಯಷ್ಟಿ ಮತ್ತು ಸಮಷ್ಟಿ ಜೀವನದ ಚಾರಿತ್ರ್ಯಕ್ಕೆ ಶಿಸ್ತು ಸಂಯಮಗಳ ಸಂಸ್ಕಾರ ನೀಡಿದರು. ಅವರು ಕಾಯಕದ ಕಲಿಯಾಗಿದ್ದರು. ದಾಸೋಹದ ದಾರ್ಶನಿಕರಾಗಿದ್ದರು. ಎನಗಿಂತ ಕಿರಿಯರಿಲ್ಲ ಎಂಬ ಸಜ್ಜನಿಕೆಯ ಸಾಕಾರ ಮೂರ್ತಿಯಾಗಿದ್ದವರು ಇಹದ ಮಣಹವನ್ನು ಮುಗಿಸಿ ಬಯಲಲ್ಲಿ ಬಯಲಾದ ಮಹಾನುಭಾವಿ.

ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಕಂಡು ಬರುವ ಬೃಹತ ಶರಣ ಸಂಕುಲದ ಕೇಂದ್ರ ಬಿಂದುವಾಗಿದ್ದರು. ದೈವೀಧ್ಯಾನ, ಸಮಾನ ಲಾಂಛನ, ಸಂಸಾರ ಜೀವನ, ಕಾಯಕ ಸಾಧನ, ದಾಸೋಹ ಭಾವನೆ, ಸಾಹಿತ್ಯ ಚಿಂತನ, ವಿಚಾರ ಮಂಥನ ಮತ್ತು ಶೂನ್ಯ ಸಂಪಾದನೆ ಇವುಗಳನ್ನು ಶರಣ ಜೀವನದ ಸೂತ್ರಗಳನ್ನಾಗಿ ಮಾಡಿದರು. ಅಜ್ಞಾನ ನಿರ್ಮೂಲನ ಬಡತನ ನಿವಾರಣೆ ಮತ್ತು ಶೀಲ ಸಂಪಾದನೆಗಳ ಮೂಲಕ ಲೋಕ ಜೀವನವನ್ನು ಸುಧಾರಿಸುವ ಕ್ರಾಂತಿಕಾರಿ ಬಸವಣ್ಣನವರು. ಸಮಾಜ ವ್ಯವಸ್ಥೆ ದಾರ್ಮಿಕ ನೀತಿ, ರಾಜಕೀಯ ದೃಷ್ಠಿ ಸಾಹಿತ್ಯ ಸೃಷ್ಠಿ ಮತ್ತು ವ್ಯಕ್ತಿ ಚಾರಿತ್ರ್ಯಗಳಿಗೆ ಹೊಸ ಆಯಾಮ ಒದಗಿಸಿದ ಯುಗ ಪ್ರವರ್ತಕ ಬಸವಣ್ಣನವರು. ಅವರ ಬದುಕಿನ ಸ್ಮರಣೆ ಮತ್ತು ಅವರ ಆದರ್ಶಗಳ ಆಚರಣೆ ಇಂದು ಅಗತ್ಯ. ಬಸವಣ್ಣನವರು ಆಗಿ ಹೋದ ಜೀವ, ಆದರೆ ಈಗಲೂ ಬೇಕಾಗಿರುವ ಜೀವನ ಮುಂದೆಯೂ ಬೇಕಾಗುವ ಚೇತನವೆಂದು ಪ್ರತಿವರ್ಷ ಬಸವ

ಜಯಂತಿಯಂದು ಬಸವಕಲ್ಯಾಣದಲ್ಲಿ ಮೂರು (೩) ದಿನಗಳ ಕಾಲ ಅತಿ ವೈಭವದಿಂದ ಉತ್ಸವ ನಡೆಸುತ್ತಾರೆ. ಪ್ರತಿ ದಿವಸ ಭಾಷಣ, ಪ್ರವಚನ, ಉಪನ್ಯಾಸ, ಕಾರ್ಯಕ್ರಮಗಳು ಏರ್ಪಡಿಸುವರು.

ಪ್ರತಿಯೊಂದು ಓಣಿಯಲ್ಲೂ ಕೇಳುವಂತೆ ಧ್ವನಿವರ್ಧಕಗಳನ್ನು ಅಳವಡಿಸುತ್ತಾರೆ. ಆ ಉತ್ಸವಕ್ಕೆ ನಾನಾ ಬಗೆಯ ಧರ್ಮದವರು ಬರುತ್ತಾರೆ. ಬಸವೇಶ್ವರ ದೇವಾಲಯ ಬಸವಕಲ್ಯಾಣದ ಮಧ್ಯದಲ್ಲಿ ವಿಶಾಲವಾದ ಈ ಗುಡಿಯನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಬಸವೇಶ್ವರ ದೇವಸ್ಥಾನ ಸಮಿತಿಯವರು ಉತ್ಸವ ನಡೆಸುತ್ತಾರೆ.

ಉತ್ಸವದ ಪ್ರಥಮ ದಿನದಂದು ತೊಟ್ಟಿಲು ಕಾರ್ಯಕ್ರಮ, ಭಜನೆ, ಕೀರ್ತನೆ, ಪ್ರವಚನ, ಪಲ್ಲಕ್ಕಿ, ಮೆರವಣಿಗೆ ನೆರವೇರಿಸುತ್ತಾರೆ. ಉತ್ಸವದ ಕೊನೆಯ ದಿವಸ ೩೦ ಅಡಿ ಎತ್ತರದ ಕಟ್ಟಿಗೆಯೊಂದಕ್ಕೆ ಬಟ್ಟೆಯನ್ನು ಸುತ್ತಿ ಎಣ್ಣೆಯನ್ನು ಸುರಿದು ದೀವಟಿಗೆಯೊಂದಿಗೆ, ಬಸವಣ್ಣನ ಮೆರವಣಿಗೆ ನಡೆಸುವರು. ಮರವಣಿಗೆಯಲ್ಲಿ ಭಜನೆ ಮೇಳಗಳು ಡೊಳ್ಳು ಕುಣಿತ, ನಂದಿಕೋಲ ಕುಣಿತ ಮುಂತಾದವುಗಳು ಕಣ್ಣು, ಕಿವಿ ಮನಸ್ಸಿಗೆ, ಆನಂದವನ್ನು ಕೊಡುತ್ತವೆ. ಉತ್ಸವದ ಸಮಯದಲ್ಲಿ ಬಸವಕಲ್ಯಾಣ ತಾಲ್ಲೂಕಿನ ಪಶು ಸಂಗೋಪನಾ ಮತ್ತು ಆರೋಗ್ಯ ಇಲಾಖೆಯವರು ವಿಶೇಷವಾಗಿ ಮಳಿಗೆಗೆಗಳನ್ನು ತೆರೆಯುತ್ತಾರೆ.

ಬಸವಣ್ಣನ ಉತ್ಸವದ ಕಾಲದಲ್ಲಿ ಹಲವಾರು ಹೋಟಲಗಳು ತಲೆ ಎತ್ತುತ್ತವೆ. ವಿಭೂತಿ ಲಿಂಗ ರುದ್ರಾಕ್ಷಿ, ಹತ್ತು ಹಲವಾರು ಬಗೆಯ ವಚನಕಾರರ ಕಾರತಿಯರ ಭಾವಚಿತ್ರಗಳು ವಿದ್ಯುತ್‌ಚ್ಛಕ್ತಿ ಉಪಕರಣಗಳು ಅಂಗಡಿಯಲ್ಲಿ ದೊರೆಯುತ್ತವೆ.

ಬಸವಕಲ್ಯಾಣ ತಾಲ್ಲೂಕಿನ ಇತರ ಹಳ್ಳಿಗಳಲ್ಲಿ ನಡೆಯುವ ಪ್ರಮುಖ ದೇವರೋತ್ಸವಗಳೆಂದರೆ ಹಾರಕೂಡದಲ್ಲಿ ಚನ್ನಬಸವೇಶ್ವರ ಉತ್ಸವ ಜನೆವರಿಯಲ್ಲಿ ಮೂರು ದಿವಸ ಹುಲಸೂರಿನಲ್ಲಿ ವೀರಭದ್ರೇಶ್ವರ ಉತ್ಸವ ಜನೇವರಿಯಲ್ಲಿ ೨ ದಿವಸ ಅದರಂತೆ ಅಲ್ಲಿಯೇ ಜನವರಿಯಲ್ಲಿ ರಘುನಾಥ ಮಹಾರಾಜ ಉತ್ಸವ ಒಂದು ದಿವಸ, ಕಣ್ಣಿಯಲ್ಲಿ ಶರಣಬಸವೇಶ್ವರ ಉತ್ಸವ, ಫೆಬ್ರುವರಿಯ ೩ ದಿವಸ ಉಜಳಮ್ ಖಂಡೋಬ ಉತ್ಸವ ಮೂರು ದಿವಸ–ಮೇ ತಿಂಗಳಲ್ಲಿ ಚಿತಕೋಟದಲ್ಲಿ ವೀರಭದ್ರೇಶ್ವರ ಉತ್ಸವ ಮೂರು ದಿವಸ ಮಾರ್ಚ ತಿಂಗಳು ಚಂಡಕಾಪೂರದಲ್ಲಿ ಅಮೃತ ಕುಂಡ ಉತ್ಸವ, ಮೂರು ದಿವಸ ಮಾರ್ಚ ತಿಂಗಳಲ್ಲಿ ಚಿಕನಾಗಾಂವದಲ್ಲಿ ಶರಣಬಸವೇಶ್ವರ ಉತ್ಸವ, ಎರಡು ದಿವಸ ಮಾರ್ಚ ತಿಂಗಳು, ಬಟಗೇರಾದಲ್ಲಿ ಗೋಣಮುದ್ರ ಉತ್ಸವ ಎರಡು ದಿವಸ ಏಪ್ರಿಲ್ ತಿಂಗಳು ಕೋಹಿನೂರ ಪಹಾಡದಲ್ಲಿ ಚಾಂದ ಪಾಶಾ ಮದಾರ ಉರುಸ್, ಜಮಾದಿಲ್ವಾಲ್ ನಾಲ್ಕು ದಿವಸ ಜರಗುತ್ತದೆ.

ಬಸವಣ್ಣನ ಉತ್ಸವದಲ್ಲಿ ಮನೋರಂಜನೆಗಾಗಿ ದೊಡ್ಡಾಟ, ಬಯಲಾಟ, ಕೋಲಾಟ, ಗೊಂದಲಿಗರ ಹಾಡು, ಗೀಗೀ ಪದಗಳು, ಲಾವಣಿ, ಕರಡಿ ಮಜಲು, ಜಲಸಾ, ಕವ್ವಾಲಿ ನಂದಿಕೋಲು, ಭಜನೆ ಮುಂತಾದ ಕಲೆಗಳು ಉತ್ಸವಕ್ಕೆ ಬಂದ ಭಕ್ತರಿಗೆ ಬೇಸರ ಕಳೆಯುವ ವಿಶಿಷ್ಟ ಕಲೆಗಳಾಗಿವೆ.

೩ : ೧ (೧೪) ಪಾಪನಾಶಿನಿ ದೇವರೋತ್ಸವ :

ಪುಣ್ಯಪ್ರದ ಜಲವಿಶೇಷವೇ ಪಾಪನಾಶನಿ ತೀರ್ಥಕ್ಷೇತ್ರ. ಇದು ಬಿದರದಲ್ಲಿರುವ ಅನುಪಮ ಪ್ರೇಕ್ಷಣೀಯ ಸ್ಥಳ ಇದರ ಸುತ್ತ ಅನೇಕ ನೀರಿನ ಝರಿಗಳಿರುವುದು ಇಲ್ಲಿನ ವಿಶೇಷ. ಅಲ್ಲದೆ ಇಲ್ಲಿ ಬೃಹದಾಕಾರದ ಸ್ವಯಂಭೂ ಜ್ಯೋತಿರ್ಲಿಂಗಗಳಿವೆ. ಈ ಶಿವಲಿಂಗದ ಕುರಿತ ದಂತ ಕಥೆ ಹೀಗೆ ಇದೆ. ಸುಪ್ರೀಮ ಪರಮದೇವ ಭಕ್ತ ಆತ ತನ್ನ ಜೊತೆಯವರೊಡನೆ ದೋಣಿಯಲ್ಲಿ ಹೋಗುತ್ತಿದ್ದಾಗ ದಾರುಕನೆಂಬ ರಾಕ್ಷಸ ಅವರನ್ನು ಹಿಡಿದು ಸೆರೆಯಲ್ಲಿಟ್ಟ ಅಲ್ಲಿಯೂ ಸುಪ್ರೀಮ ಶಿವನ ಪ್ರಾರ್ಥನೆ ಬಿಡಲಿಲ್ಲ. ಸುಪ್ರೀಮನನ್ನು ಕೊಲ್ಲಲು ದಾರುಕ ಯತ್ನಿಸಿದಾಗ ಜ್ಯೋತಿರ್ಲಿಂಗದ ರೂಪದಲ್ಲಿ ಶಿವ ಬಂದು ಅವನನ್ನು ಸಂಹರಿಸಿದ ಹೀಗೆ ಪ್ರಚಲಿತವಿರುವ ಕಥೆ, ಶಿವನು ಜ್ಯೋತಿಯಂತೆ ಸರ್ವ ವ್ಯಾಪಕ ಬೆಳಕು ಕೊಡುವವನು. ಭಕ್ತರ ಮನದ ಕತ್ತಲೆಯನ್ನು ತನ್ನ ಬೆಳಕಿನಿಂದ ಕಳೆಯುವನು. ಈ ಅರ್ಥವೆಲ್ಲಾ ಈ ಶಿವಲಿಂಗದಲ್ಲಿ ಅಡಗಿದೆ. ಶಿವಶರಣ ಅಲ್ಲಮಪ್ರಭು ಮಾತಿನ ಮಹಿಮೆಯನ್ನು ವರ್ಣಿಸುತ್ತಾ ಮಾತೆಂಬುದು ಜ್ಯೋತಿರ್ಲಿಂಗ ಎಂದು ಹೇಳಿರುವುದು ನೆನೆಯಬಹುದು.

ಶಿವನನ್ನು ಆರಾಧಿಸುವ ಹಬ್ಬ ಶಿವರಾತ್ರಿಯಂದು ಪ್ರತಿವರ್ಷ ಮೂರು ದಿನಗಳವರೆಗೆ ಪಾಪನಾಶಿನಿ ಪುಣ್ಯಕ್ಷೇತ್ರದಲ್ಲಿ ಅತಿ ವೈಭವದಿಂದ ಉತ್ಸವ ಜರುಗುತ್ತದೆ. ಭಕ್ತಾದಿಗಳು ಇಡೀ ದಿವಸ ಉಪವಾಸದಿಂದಿದ್ದು ಪಾಪನಾಶಿನಿ ಕ್ಷೇತ್ರಕ್ಕೆ ಬಂದು ಪೂಜಿಸಿ, ಮೂರು ರಾತ್ರಿಯಲ್ಲಾ ಜಾಗರಣೆಯಲ್ಲಿ ಶಿವನ ಧ್ಯಾನ ಮಾಡುವರು. ಉತ್ಸವ ಸಮಯದಲ್ಲಿ ಸ್ವಯಂ ಭೂಲಿಂಗ ಬೆಳಗಿನ ಜಾವದಿಂದ ಪ್ರಾರಂಭವಾದ ಶಿವಭಜನೆ ಇಡೀ ರಾತ್ರಿ ನಿರಂತರವಾಗಿ ನಡೆಯುತ್ತದೆ. ದೇವಾಲಯದ ಸುತ್ತ ಮುತ್ತ ಭಕ್ತರು ಕುಳಿತು ಶಿವನಲ್ಲಿ ಧ್ಯಾನಸ್ಥರಾಗಿರುತ್ತಾರೆ. ತಂಡ ಉಪತಂಡ ಭಕ್ತರು ಎಲ್ಲೆಡೆ ಮೌನವಾಗಿರುತ್ತಾರೆ. ಕೆಲವರು ಭಜನೆ ಮಾಡುತ್ತಿರುತ್ತಾರೆ. ಭಕ್ತರ ಪ್ರಾರ್ಥನೆ ವೈಶಿಷ್ಟ್ಯಪೂರ್ಣವಾಗಿರುತ್ತದೆ. ಹಿರಿಯ ಸ್ವಾಮಿಗಳು ಅಧ್ಯಾಪಕ ವಿದ್ವಾಂಸರಿಂದ ಪ್ರವಚನ ಕೀರ್ತನೆ ಜರುಗುವುದು. ಉತ್ಸವಕ್ಕೆ ಬಂದ ಭಕ್ತರು ತಪ್ಪದೇ ತೀರ್ಥದಲ್ಲಿ ಮಿಂದು ದೇವರ ದರ್ಶನ ಪಡೆಯುತ್ತಾರೆ.

ಪಾಪನಾಶಿಯ ಉತ್ಸವಕ್ಕೆ ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶದ ಸಹಸ್ರಾರು ಭಕ್ತರು ಬರುತಾರೆ. ಯಾವುದೇ ಜಾತಿ ಧರ್ಮಗಳ ನಿರ್ಬಂಧನೆ ಇಲ್ಲಿಲ್ಲ. ವೃತ್ತಿಗಾಯಕರಾದ ಭೂತೇರು, ಪೋತರಾಜರು ಹಾಡುಗಳನ್ನು ಹಾಡುತ್ತಾ ಭಕ್ತರಿಂದ ಹಣ ಪಡೆಯುವುದು. ಭಕ್ತರಿಗೆ ಇವರು, ಇವರಿಗೆ ಅವರು ಕಾಡಿಸುವುದು ತುಂಬಾ ಮನೋಹರವಾಗಿ ಕಾಣಿಸುತ್ತದೆ. ಹಂಗಾಮಿ ಅಂಗಡಿಗಳಲ್ಲಿ ಟೆಂಗು–ಕಾಯಿ, ಕರ್ಪೂರ, ಮಿಠಾಯಿ, ಲಡ್ಡು, ಬೆಂಡು, ಬತಾಸು, ಅಳ್ಳು, ಪುಟಾಣಿ, ವಿಶೇಷವಾಗಿರುತ್ತದೆ. ಚಿಕ್ಕ ಹುಡುಗರಿಂದ ಹಿಡಿದು ಹಿರಿಯರವರೆಗೆ "ಜನ ಮರುಳೋ ಜಾತ್ರೆ ಮರುಳೋ" ಎನ್ನುವಂತೆ ಪುಗ್ಗಾ–ಪುಂಗಿಗಳಿಂದ ಭಜನೆ ಹಾಡುಗಳಿಂದ ಧ್ವನಿವರ್ಧಕಗಳಿಂದ ಉತ್ಸವ ಕಿರ್ರ್ ಎನ್ನುತ್ತದೆ.

ಭಿಕ್ಷುಕ ಕುಡುಕರ ಸಾಲು ಹರಡಿರುತ್ತದೆ. ಅವರವರ ಬಾಯಿಯಿಂದ ದುಃಖದ ಹಾಡು ಹೊರಬರುತ್ತಿರುತ್ತದೆ. ಉತ್ಸವಕ್ಕೆ ಬಂದ ಜನರು ಮನೆಗೆ ಹೋಗುವಾಗ ಮಾತ್ರ ದಾನ-ಧರ್ಮ ಮಾಡುವರು. ಹಣ ಕೊಡುವರು. ಶಿವರಾತ್ರಿಯ ಮೂರನೇ ದಿನದವರೆಗೆ ಅಖಂಡ ಭಜನೆ ನಡೆದಿರುತ್ತದೆ. ಅಂದು ಅನ್ನಸಂತರ್ಪಣೆ ಮಾಡುವರು. ಉತ್ಸವ ಸಂದರ್ಭದಲ್ಲಿ ಮದುವೆ ಮುಂಜಿಗಳು ನಡೆಯುತ್ತವೆ. ಉತ್ಸವ ಸಂದರ್ಭದಲ್ಲಿ ವಿವಾಹವಾದ ನವದಂಪತಿಗಳು ಉತ್ಸವಕ್ಕೆ ಬಂದು ತೀರ್ಥಕ್ಷೇತ್ರದಲ್ಲಿ ಮಿಂದು ದರ್ಶನ ಪಡೆದು ಆ ದಿನ (ಮಧು-ಚಂದ್ರ ಶುಭ ರಾತ್ರಿ) ಕಳೆಯುವ ಪರಂಪರೆ ಇದೆ ತೀರ್ಥ ಕ್ಷೇತ್ರದಲ್ಲಿ ಮಿಂದರೆ ಉತ್ಸವಕ್ಕೆ ಬಂದರೆ ಮಾಡಿದ ಪಾಪ ಕರ್ಮಗಳೆಲ್ಲ ನಾಶವಾಗಿ ಹೋಗುತ್ತವೆಯೆಂಬ ನಂಬಿಕೆ ಅಚ್ಚಳಿಯದೆ ನಿಂತಿದೆ.

೩ : ೧ (೧೫) ಮೈಲಾರ ಲಿಂಗ ದೇವರೋತ್ಸವ :

ಮೈಲಾರ ಲಿಂಗ ದೇವರೋತ್ಸವ ನಮ್ಮ ಬೀದರ ನಗರದಲ್ಲಿ ನಡೆಯುವ ಅದ್ದೂರಿಯ ಉತ್ಸವಗಳಲ್ಲಿ ಒಂದಾಗಿದೆ. ಬೀದರ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಮೈಲಾರ (ಖಾನಪೂರ ಹೆಸರಿನ) ಪ್ರಸಿದ್ಧವಾಗಿರುವ ಜನಪ್ರಿಯ ಕ್ಷೇತ್ರ, ಇದಕ್ಕೆ 'ದಕ್ಷಿಣ ಕಾಶಿ' ಎಂದು ಕರೆಯುತ್ತಾರೆ. ಇಲ್ಲಿ ಮೈಲಾರ ಲಿಂಗೇಶ್ವರ ದೇವಾಲಯವಿದೆ. ಪ್ರತಿವರ್ಷ ಡಿಸೆಂಬರ-ಜನವರಿ ತಿಂಗಳಲ್ಲಿ ೩೦ ದಿನಗಳವರೆಗೆ ಉತ್ಸವ ನಡೆಯುತ್ತದೆ.

ಗ್ರಾಮದೇವತೆಗಳಲ್ಲಿ ವಿಶಿಷ್ಟ ಗುಣ ಲಕ್ಷಣ, ಪುರಾಣ, ಚರಿತ್ರೆ, ಪರಂಪರೆ ಹೊಂದಿದ ಸಂಕೀರ್ಣ ಗಂಡು ದೇವತೆ ಮೈಲಾರಲಿಂಗ. ಆದಿಕಾಲದ ಮಣ ಚೂಲಿ ಪರ್ವತ ಮುನಿಗಳ ತಪೋಭೂಮಿ, ಮಲ್ಲಾಸೂರ ಮಾಣಿಕಾಸೂರ ರಾಕ್ಷಸರು ಬ್ರಹ್ಮದೇವನ ವರದ ಬಲದಿಂದ ಉನ್ಮತ್ತರಾಗಿ ಲೋಕ ಕಂಠರಾದರು. ಮಾಣಿತೂಟ ಬೆಟ್ಟದ ಪ್ರದೇಶದ ಸಂತಾಪಕ್ಕೊಳಗಾಯಿತು. ಮುನಿಗಳು, ಇಂದ್ರ-ವಿಷ್ಣು ಇತ್ಯಾದಿ ಪ್ರಮುಖರು ಕೂಡಿ ಶಿವನ ಹತ್ತಿರ ಹೋಗಿ ರಕ್ಕಸನ ಉಪದ್ರವ ದೌರ್ಜನ್ಯಗಳ ಪರಿಹಾರಕ್ಕೆ ಪ್ರಾರ್ಥಿಸಿದರು. ಶಿವನು ಉಗ್ರವಾಗಿ ಜಡೆಯನ್ನು ಭೂಮಿಗೆ ಅಪ್ಪಳಿಸಿದನು. ಆ ಜಡೆಯಿಂದ ಅದ್ಭುತಾಕಾರದ ಮಹಾಮಾಯೆ ಮೂಡಿ ನಿಂತಳು. ಮುನಿಗಳು ಶಿವನ ಅಪ್ಪಣೆ ಪಡೆದು ತುಪ್ಪದಿಂದ ಅವಳಿಗೆ ಅಭಿಷೇಕ ಮಾಡಿದರು ಅವಳನ್ನು ಪೈತವಂದಿ ಎಂದು ಕರೆದು ಅವಳಿಂದ ರಾಕ್ಷಸ ಸಂಹಾರದ ಅಭಯ ಪಡೆದರು.

ಶಿವನು ಮಾರ್ತಾಂಡ ಭೈರವನಾದ. ಅವನ ವೇಷ ವಿಲಕ್ಷಣ ಹಳದಿ ಬಣ್ಣ ಪಿತಾಂಬರ ಹುಲಿಚರ್ಮ ಕಂಬಳಿಯ ನಿಲುವಂಗಿ ಕಂಬಳಿಯ ಟೊಪ್ಪಿಗೆ-ಕಿರೀಟ, ಕೈಯಲ್ಲಿ ಖಡ್ಗ, ತ್ರಿಶೂಲ, ಢಮರು, ಪಾನ ಪಾತ್ರೆ (ಡೋಣಿ) ಹಣೆಗೆ ಭಂಡರ ಹುಬ್ಬುಗಳು ನಡುವೆ ಕುಂಕುಮ ಬಿಳಿ ಕುದರೆಯೇರಿ ರಭಸದಿಂದ ಮುನ್ನುಗ್ಗಿದ ಮಾರ್ತಾಂಡ ಭೈರವ ಜೊತೆ ಹೆಗ್ಗಯ್ಯ ನಾಗಿ ಹರಿ ಭೈರವನ ಕೋಪದಿಂದ ಹುಟ್ಟಿದ ನಾಯಿಗಳು, ವೀರಭದ್ರ ಜಯನಂದಿ ಇತ್ಯಾದಿ. ಪಾರ್ವತಿಯ ಗಂಗೆ ಮಾಳವ್ವನಾಗಿ ರಕ್ಕಸದ ವಿರುದ್ಧ ಹೋರಾಡಲು ಅಣಿಯಾದಾಗ ಚಂಡಿ ರಣ ಚಂಡಿ ಕಾಲದುರ್ಗಿ ಹೀಗೆ ಉಗ್ರ ರೂಪಧರಿಸಿ ಸೈನ್ಯವನ್ನು ಕೂಡಿದಳು. ಮಾರ್ತಾಂಡ

ಭೈರವ ಉಗ್ರ ಕೋಪದಿಂದ ಡಮರು ಭಾರಿಸಿದರೆ ಮೂರು ಲೋಕ ನಡುಗಿದವು. ಮಲ್ಲಾಸುರ–ಮಾಣಿಕಾಸುರರು ಮತ್ತು ಶಿವಸೈನ್ಯದ ನಡುವೆ ಭೀಕರ ಕದನ ಮಾಣಿಕಾಸುರ ಗಾಯಗೊಂಡು ಶಿವನ ಪಾದಗಳಲ್ಲಿ ಬಿದ್ದು ಶಿವನ ಕೃಪಾಭಿಕ್ಷೆ ಕೇಳುತ್ತಾನೆ.

ಪಶ್ಚಾತ್ತಾಪದಗ್ಧನಾದ ಅವನು ಶಿವನು ಪಾದ ಸೇರುತ್ತಾನೆ. ಅದರಂತೆ ಮಾರ್ತಾಂಡ ಭೈರವನ ಪಾಶಾ ಪತಾಸ್ತ್ರ ಮಲ್ಲಾಸುರರನ್ನು ಸೀಳುತ್ತದೆ. ಮಲ್ಲ ತಡಮಾಡದೆ ಭೈರವನ ಪಾದಗಳನ್ನು ಗಟ್ಟಿಯಾಗಿ ಹಿಡಿದಾಗ ಅವನಿಗೆ ಜ್ಞಾನೋದಯವಾಗಿತ್ತು. ಶಿವನೇ ಸದಾ ನಿನ್ನ ಪದತಲದಲ್ಲಿರುವಂತೆ ಕರುಣಿಸು ಎಂದು ಪ್ರಾರ್ಥಸಿದ. ಮಲ್ಲರಕ್ಕಸನಿಗೆ ಶಿವನ ಕರುಣೆಯಿಂದ ಆಶ್ರಯವಿತ್ತು ಹರಿಸಲು ನೆರೆದ ಏಳು ಕೋಟಿ ಸೈನ್ಯವೂ ಮಲ್ಲಾರಿ ಮಾರ್ತಾಂಡ ಉಘೇ ಉಘೇ ಎಂದು ಉಗ್ಗಡಿಸಿದರು. ಮಲ್ಲಾರಿ ಮಣಚೂಲದ ಬೆಟ್ಟದ ತುದಿಯಲ್ಲಿ ನಿಂತು ಕೈಯಲಿದ್ದ ಶಿವಧನಸ್ಸನ್ನು ಠೇಂಕರಿಸಿ ಸದ್ದುಸದ್ದುಲೇ ಪರಾಕ್ ಅಂದನಂತೆ ಏಳು ಜನವೂ ಸ್ತಬ್ಧ ಮಲ್ಲಾಸುರನ ಬಯಕೆ ಸದಾ ನಮ್ಮ ಚರಣದಲ್ಲಿರುವುದು ನಾನು ಮಲ್ಲನಿಗೆ ಅರಿಯಾದರೂ ನನ್ನನ್ನು ಮಲ್ಲಾರಿ ಲಿಂಗ ಎಂದು ಕರೆಯಿರಿ ಆಗ ಏಳು ಕೋಟಿ ಕಂಠಗಳೂ ಚಾಂಗು ಉಘೇ ಮಲ್ಲಾರಿಲಿಂಗ ಏಳು ಕೋಟಿ ಏಳು ಕೋಟಿ ಏಳು ಕೋಟಿಗೋ ಮೈಲಾರ ಲಿಂಗ ಉಗ್ಗಡಣಿ ಏಳು ಕೋಟಿ ಉದ್ಘೋಷ ನಭೋ ಮಂಡಲವನ್ನು ತುಂಬಿ ನಿನದಿಸಿತು ಸದ್ವ ಸದ್ವಾಲೇ ಪರಾಕ್ ಎಂದನಂತೆ ಮಲ್ಲಾರಿಲಿಂಗ ಮತ್ತೆ ನಿಶ್ಯಬ್ಧ ಮಲ್ಲಾರಿಲಿಂಗ ಮುಂದುವರಿದು ನುಡಿದ :

ಪಾರ್ವತಿ ಮಾಲತಿ, ಶ್ರೀಹರಿ ಹೆಗ್ಗಯ್ಯ ಷಣ್ಮುಖ ಚಿಕ್ಕಯ್ಯ,
ಗಣಪತಿ ದೊಡ್ಡಯ್ಯ ದೇವರ ಗುಡ್ಡದಲ್ಲಿಯೇ ವಾಸ,
ಅಶ್ವೀಜ ಬಹುಳ ನವಮಿ ಮಾಣಿಕಾಸುರನ ಸ್ಮರಣೆಗೆ ತುರಗಪೂಜೆ
ತುರಗದೊಡನೆ ಮಲ್ಲಾರಿಲಿಂಗನ ಪೂಜೆ ನಕ್ಷತ್ರ ರೂಪದಿಂದ
ನನ್ನ ದರ್ಶನ ಗಿರಿಶಿಖರದಲ್ಲಿ–ಅದೇ ನನ್ನ ಕುರುಹಪ
ಆಲದ ಮರದ ನೆರಳು–ಅದೇ ನನ್ನ ಆಶ್ರಯ, ಭಕ್ತರಿಗೆ ನೆರವು
ಮಲ್ಲಾಸುರ ಹತನಾದ ಡೆಂಕನ ಮರಡಿ: ಅಲ್ಲಿ ಮಾಲತಿ ಪ್ರಜೆ
ವಾಸ ಹತ್ತಿದಿನ ಹನ್ನೊಂದನೆಯ ದಿನ ತುಂಗಾನದಿ ದಾಟಿ ಪಯಣ
ಆಚೆದಡದಲ್ಲಿ ವಾಸ–ಮಾಘ ಪೂರ್ಣಿಮೆ ಉತ್ಸವ ಮಾಘ ಬಹುಳ ಬಿದಿಗೆ

ಭಕ್ತರ ಉದ್ಧಾರಕ್ಕಾಗಿ ಕಾರಣಿಕ. ಏಳು ಕೋಟಿಗೋ ಪರಾಕ್ ಎಂದು ಮೈಲಾರಲಿಂಗನ ಪುರಾಣ ಕಥೆ ಮೈಲಾರಲಿಂಗ ಕರ್ನಾಟಕದ ಧಾರವಾಡ ಜಿಲ್ಲೆಯ ರಾಣಿಬೆನ್ನೂರಿನ ಹತ್ತಿರ ದೇವರ ಗುಡ್ಡ. ಅಲ್ಲಿಂದ ಸಮೀಪ ತುಂಗಭದ್ರ ನದಿಯ ದಡದಲ್ಲಿರುವ ಮೈಲಾರ ಕ್ಷೇತ್ರ. ಗುಲಬರ್ಗಾ ಜಿಲ್ಲೆಯಲ್ಲಿರುವ ಮೈಲಾರ ಎನ್ನುವ ಒಂದು ಕ್ಷೇತ್ರ. ಬೀದರ ಜಿಲ್ಲೆಯಲ್ಲೊಂದು ಹೀಗೆ ಕನ್ನಡ ನಾಡಿನ ಅನೇಕ ಕಡೆಗಳಲ್ಲಿ ಮೈಲಾರ ಲಿಂಗನ ದೇವಾಲಯಗಳು ಕಂಡು ಬರುತ್ತವೆ. ಈ ಎಲ್ಲಾ ಕ್ಷೇತ್ರಗಳಲ್ಲೂ ಮೈಲಾರ ಲಿಂಗನ ಪೂಜೆ ಉತ್ಸವಗಳು ಹೆಚ್ಚು ಕಡಿಮೆ ಒಂದೇ ಸ್ವರೂಪದಿಂದ ಕೂಡಿವೆ.

ನಮ್ಮ ನಾಡಿನಲ್ಲಿ ಮೈಲಾರಲಿಂಗ–ಲಿಂಗೇಶ್ವರ ಮಲ್ಲಣ್ಣ ಎಂದು ಹೆಸರು ಪಡೆದರೆ ಮಹಾರಾಷ್ಟ್ರದಲ್ಲಿ ಖಂಡೋಬಾ ನಾಗಿ ಹೆಸರು ಪಡೆದು ಜನಪ್ರಿಯ ದೇವತೆಯಾಗಿದ್ದಾನೆ.

ಬೀದರನಿಂದ ೩೦ ಕಿ.ಮೀ. ಭಾಲ್ಕಿ ತಾಲ್ಲೂಕಿನಿಂದ ೨೬ ಕಿ.ಮೀ. ಅಂತರದಲ್ಲಿರುವ ಮೈಲಾರ ಲಿಂಗೇಶ್ವರನ ದೇವಾಲಯದಲ್ಲಿ ಸ್ವಯಂಭೂಲಿಂಗವಿದೆ. ಈ ದೇವಾಲಯವನ್ನು ಪ್ರಕೃತಿಯ ಸುಂದರ ಪರಿಸರದ ಮಧ್ಯ ಕಟ್ಟಲಾಗಿದೆ. ದೇವಾಲಯದ ಸುತ್ತ ನೀರಿನ ಹೊಂಡಗಳು, ಝರಿಗಳು ನೂರಾರು ಸ್ವಯಂ ಭೂ ಲಿಂಗಗಳು ಇವೆ. ೩೦ ದಿನಗಳವರೆಗೆ ನಡೆಯುವ ಈ ಉತ್ಸವಕ್ಕೆ ಸಹಸ್ರಾರು ಕುರುಬರು, ಲಿಂಗಾಯತರು, ಬ್ರಾಹ್ಮಣರು, ಇನ್ನಿತರ ವರ್ಗದ ಜನರು ಬರುತ್ತಾರೆ. ಉತ್ಸವದ ದಿನಗಳಲ್ಲದೆ ಪ್ರತಿ ರವಿವಾರ ದೊಡ್ಡ ಪ್ರಮಾಣದ ದನಗಳ ಜಾತ್ರೆ ನಡೆಯುತ್ತದೆ.

ಮೈಲಾರಲಿಂಗರ ದೇವರೋತ್ಸವದಲ್ಲಿ ಪ್ರತಿ ದಿನದ ಆಚರಣೆಗಳೆಂದರೆ ಮೈಲಾರಲಿಂಗೇಶ್ವರನಿಗೆ ಅರಿಶಿಣದಿಂದ ಪೂಜೆ, ಭಜನೆ, ಅರಿಶಿಣ ಹಾರಿಸುವುದ, ಕೊಬ್ಬರಿ ಹಾರಿಸುವುದು, ಉತ್ಸವದ ಕೊನೆಯಲ್ಲಿ ಪಲ್ಲಕ್ಕಿ ಮೆರವಣಿಗೆಯನ್ನು ಮಾಡುವರು. ಏಳು ಕೋಟಿ ಏಳು ಕೋಟಿ ಉಘೇ ಉಘೇ ಎಂದು ಭಕ್ತರೆಲ್ಲರೂ ಉಗ್ಗಡಿಸುವರು.

ಉತ್ಸವದಲ್ಲಿ ಕುರುಬ ವರ್ಗದವರೇ ಹೆಚ್ಚಾಗಿದ್ದು ನರಸಗೊಂಡ, ಭೀಮಗೊಂಡ, ಶಾಮಗೊಂಡ, ಮಲಗೊಂಡ, ಲಾಲಗೊಂಡ, ಮುಂತಾದ ಹೆಸರಿನವರೇ ಕಂಡು ಬರುತ್ತಾರೆ. ಗೊಂಡ ಎಂದರೆ ದ್ರಾವಿಡ ವರ್ಗಕ್ಕೆ ಸೇರಿದ ವಿಂದ್ಯ ಪರ್ವತ ಬಳಿಯಿರುವ ಒಂದು ಜನಾಂಗವಾಗಿತ್ತು. ಆ ಜನಾಂಗಕ್ಕೆ ಸೇರಿದ ವ್ಯಕ್ತಿ (ವೆಂಕಟ ಸುಬ್ಬಯ್ಯ : ೧೯೭೭ : ೨೬.೨೮) ಕಾಡುಗಳಲ್ಲಿ ಸಾಧಾರಣವಾಗಿ ವಾಸಿಸುವ, ಆಡು ಕುರಿಗಳನ್ನು ಕಾಯ್ದುಕೊಂಡು ಉಪಜೀವನ ನಡೆಸುವವರನ್ನು ಕಾಡು ಕುರಬರೆಂದು ಕರೆಯುವರು. ಈ ಕುರುಬರೇ ಗೊಂಡ ವರ್ಗಕ್ಕೆ ಸೇರಿದವರು. ಇವರ ವೇಷ–ಭೂಷಣ ವಿಶೇಷವಾಗಿದೆ. ಕಾಲಲ್ಲಿ ಚಡಾವಬೂಟು ಹೆಗಲಮೇಲೆ ಕರಿಯ ಅಥವಾ ಬಿಳಿಯ ಕಂಬಳಿ, ತಲೆಗೆ ಕೆಂಪು ಅಥವಾ ಬಿಳಿ ರುಮಾಲು ಖಮೀಸ ಅಂಗಿ, ಕಾಟನ ಧೋತಿ, ಇತ್ಯಾದಿ ಧರಿಸಿಕೊಂಡು ಬರುತ್ತಾರೆ. ಮೈಲಾರ ಲಿಂಗನ ಉತ್ಸವದಲ್ಲಿ ಏಳು ಕೋಟಿಗೋ ಏಳು ಕೋಟಿಗೋ ಉಘೇ ಉಘೇ ಎಂದು ಉದ್ಘೋಷ ಮಾಡುವ ಪದ್ಧತಿ ಇದೆ.

ಉತ್ಸವ ಐದು ದಿವಸ ವಿಶೇಷವಾಗಿ ಜರುಗಿದರೂ ೩೦ ದಿನಗಳವರೆಗೂ ಭಕ್ತರೂ ಬಂದು ಹೋಗುವ ಸಂಪ್ರದಾಯವಿರುವುದರಿಂದ ಮೈಲಾರ ಲಿಂಗನ ಉತ್ಸವ ಮೂವತ್ತು ದಿನಗಳದ್ದೇ ಎಂದು ಹೇಳುವ ವಾಡಿಕೆ. ಪ್ರತಿವರ್ಷ ಈ ಉತ್ಸವಕ್ಕೆ ಕರ್ನಾಟಕದ ಮೂಲೆ ಮೂಲೆಯಿಂದ ಮಹಾರಾಷ್ಟ್ರದ ಕೆಲವು ಭಾಗಗಳಿಂದ ಸಾವಿರಾರು ಜನರು ಬರುತ್ತಾರೆ. ಸರ್ಕಾರ ಈ ಉತ್ಸವ ಯಾತ್ರೆಗಳ ವ್ಯವಸ್ಥೆ ದುರಸ್ತಿಗಾಗಿ ಧನಸಹಾಯ ಮಾಡುತ್ತಿದೆ. ಭಕ್ತರಿಂದ ಚಂದಾ ಹಣ ಬರುತ್ತಿದೆ. ಬಂದ ಹಣದಿಂದ ಕಟ್ಟೆಗಳ ನಿರ್ಮಾಣ ಒಳಚರಂಡಿ ವ್ಯವಸ್ಥೆ ಮಾಡುತ್ತಿದ್ದಾರೆ.

ಉತ್ಸವದಲ್ಲಿ ಬಣ್ಣ-ಬಣ್ಣದ ಉಡುಗೆ-ತೊಡುಗೆ, ಮಣಿ-ಮುತ್ತುಗಳು, ಕರಿಕಂಬಳಿ, ಬಿಳಿಕಂಬಳಿಗಳು, ಕುರಿಗಳ ಉಣ್ಣೆ ಉಪಕರಣಗಳು, ಖಾನಾವಳಿ ಹೋಟಲ್‌ಗಳು ವ್ಯಾಪಾರ ಭರಾಟೆಯಿಂದ ನಡೆಯುತ್ತದೆ. ಅಷ್ಟೇ ಪ್ರಮಾಣದಲ್ಲಿ ದನಗಳ ಸಂತೆಯೂ ಕೂಡಿರುತ್ತದೆ. ಅರಣ್ಯ ಇಲಾಖೆಯವರು ಸಸ್ಯಗಳ ಪ್ರದರ್ಶನ ಏರ್ಪಡಿಸಿ ಯಾತ್ರಿಕರಿಗೆ ಸಸ್ಯಗಳು ಗಿಡಮರಗಳು ಬೆಳೆಸುವ ಉಳಿಸುವ ಮಾಹಿತಿ ನೀಡುತ್ತಾರೆ. ಮಾರ್ತಾ ಪ್ರಚಾರ ಮತ್ತು ಕುಟುಂಬ ಕಲ್ಯಾಣ ಇಲಾಖೆಯವರು ರಾತ್ರಿ ಹೊತ್ತಿನಲ್ಲಿ ಸಿನೆಮಾ ತೋರಿಸುತ್ತಾರೆ. ಉತ್ಸವಕ್ಕೆ ಬಂದು ಮೊದಲು ಧರ್ಮ ಶಾಲೆಗಳಲ್ಲಿ ಜಾಗ ಹಿಡಿದವರೇ ಜಾಣರು. ಕೆಲವರು ದೇವಾಲಯದ ಪರಿಸೀನ ಮೇಲೆ, ಮರಗಳ ಕೆಳಗೆ ಮಲಗುವರು. ಅಡಿಗೆ ಮಾಡುವರು, ಹರಟೆ ಹೊಡೆಯುವುದು ಮಾಡುತ್ತಾರೆ. ಉತ್ಸವದಲ್ಲಿ ಹಂಗಾಮಿ ಅಂಗಡಿಗಳು ಪ್ರಾರಂಭ ಮಾಡವರು ಉತ್ಸವಗಿಂತ ಒಂದು ವಾರ ಮೊದಲೇ ಬರುವ ವಾಡಿಕೆ ಪ್ರಮುಖ ಸ್ಥಳಗಳನ್ನು ಆರಿಸಿಕೊಂಡು ಅಂಗಡಿ ರಚನೆಗೆ ತೊಡಗುತ್ತಾರೆ. ಬಿದಿರು ಕಟ್ಟಿಗೆ, ತಾಡಪತ್ರಿ, ಬಣ್ಣ-ಬಣ್ಣದ ಬಟ್ಟೆ ಮುಂತಾದವುಗಳನ್ನು ಅಂಗಡಿ ರಚನೆ ಮಾಡವ ಸಲುವಾಗಿ ಬೇಕಾಗುತ್ತವೆ.

ಪೀಪಿ, ಬಲೂನ ಇತರೆ ಆಟದ ಸಾಮಾನುಗಳು ಬಗೆ ಬಗೆಯ ತಿಂಡಿಗಳು, ಭಾಂಡೆ-ಬಟ್ಟೆ ಮುಂತಾದ ಗೃಹೋಪಯೋಗಿ ವಸ್ತುಗಳು, ಬಳೆ, ಮುತ್ತಿನ ಸರ, ಕಿವಿಯೋಲೆ, ಕಲಾತ್ಮಕ ಕಸೂತಿ ವಸ್ತುಗಳು ಸಣ್ಣ ಸರ್ಕಸ್, ಜಾದೂ, ಕಸರತ್ತು ಏನುಂಟು ಏನಿಲ್ಲ. ಎಲ್ಲರನ್ನು ಆಕರ್ಷಿಸುವ ಈ ಉತ್ಸವ ಹಂಗಾಮಿ ಅಂಗಡಿಗಳ ಮಾಲೀಕರಿಗೆ ನಿದ್ದೆ ಎಂಬುದು ಅಪರೂಪ ದಿನಕ್ಕೆ ಎರಡು ತಾಸು ನಿದ್ರೆಯಾದರೆ ಸಾಕು ಭರಾಟೆ ವ್ಯಾಪಾರ ಮಾಡುವದರಿಂದ ನಿದ್ರೆ ಮಾಯವಾಗುತ್ತದೆ. ಶರೀರ ಬಗ್ಗಿ ಹೋಗುತ್ತದೆ. ಗಿರಾಕಿಗಳು ವಿಚಿತ್ರ. ಇವನು ಕೇಳಿದ ಬೆಲೆಗೆ ಕೊಡುವುದಿಲ್ಲ. ಹೀಗೆ ನಡೆದು ವ್ಯಾಪಾರ ಕುದುರಬಹುದು. ಇಲ್ಲವೆ ಕಮರಬಹುದು. ಇಂಥದರಲ್ಲಿಯೇ ಲಾಭ ಗಿಟ್ಟಿಸುತ್ತಾರೆ. ಭದ್ರ ಗೋಡೆಗಳು, ಬಾಗಿಲುಗಳು ಇಲ್ಲದ ಅಂಗಡಿಗಳು ಸದಾ ಕಾಯುವದೆಂದರೆ ಎಂಥ ಕಾವಲುಗಾರನಿಂದಲೂ ಸಾಧ್ಯವಿಲ್ಲದ ಕೆಲಸ. ಜನ ಸಂದಣಿ ಹೆಚ್ಚಿದಾಗ ಇವರ ಮೈಯೆಲ್ಲ ಕಣ್ಣಾಗಿ ವ್ಯವಹಾರ ನಡೆಸುವರು. ಇವರಿಗೆ ಯಾವುದೇ ಕಾರಣಗಳಿಂದ ಹಣಬೇಕೆಂದರೆ ಕೊಡುವವರು ಯಾರೂ ಇಲ್ಲ. ಬ್ಯಾಂಕುಗಳು, ಸಹಕಾರಿ ಸಂಘ ಸಂಸ್ಥೆಗಳು ಇವುಗಳ ಅಂಗೀಕಾರ ಇರುವುದಿಲ್ಲ. ಸಾಗಾಣಿಕೆಯ ವೆಚ್ಚವು ಕಡಿಮೆ ಇಲ್ಲ. ಕೆಲವು ಸಲ ಸಾವಿರದ ಅಂಕಿ ತಲುಪುತ್ತದೆ.

ಈ ಉತ್ಸವದಲ್ಲಿ ದಿಲ್ಲಿ ಹೋಟಲ್, ಸಣ್ಣ ಉತ್ಸವದಲ್ಲೊಂದು ದೊಡ್ಡ ಅಂಗಡಿ, ನೂರಾರು, ಐನೂರು ಚದರ ಅಡಿಗಳಷ್ಟು ಜಾಗದಲ್ಲಿ ಮೈಯಲಿನಿಂತ ಹೋಟಲ್ ಅಲ್ಲಿಯವು. ಅಲ್ಲಿಯದೆಲ್ಲ ದಿಲ್ಲಿಯಿಂದ ಬಂದುದು. ಉತ್ತರದ ತಿಂಡಿ-ತಿನುಸುಗಳನ್ನು ದಕ್ಷಿಣದವರೆಗೆ ಪರಿಚಯಿಸುವ ರಾಯಭಾರಿ ಉತ್ಸವ ಮಾಡುತ್ತದೆ. ಮೈಲಾರ ದೇವರೋತ್ಸವ ನಾಲ್ಕೈದು ದಿನಗಳಿದ್ದರೂ ೨೦-೩೦ ದಿನಗಳ ಠಿಕಾಣಿ ಇವರದು. ಅಂಗಡಿಯ ಮುಂಭಾಗದ ಮೇಲ್ಗಡೆ ಒಂದು ನಾಮ ಫಲಕ. ಅದರಲ್ಲಿ ಪ್ರದರ್ಶನ ಮಿರ್ಚಿ, ಪಕೋಡೆ, ಶೇರಲಾ, ತಾಜಾ, ತಾಜಾ ಜಾಮೂನು ಕಲಾ ಜಾಮೂನು, ರಸ ಮಲಾಯಿ, ಚಣ್ಣಾ, ಭಟ್ಟೂರ, ಅಗ್ರದಾಲ್

ಮಿಲ್ ಪೂರಿ, ಇಡ್ಲಿ, ತರತರ ಆಕಾರದ ತಿಂಡಿಗಲು, ಬಾಯಲ್ಲಿ ನೀರೂರಿಸುತ್ತವೆ. ಹದಿನೈದು ಜನ ದಿಲ್ಲಿಯ ತರುಣರು ಹುಟ್ಟು ಹಾಕಿದ ಯೋಜನೆಯದು. ದಿಲ್ಲಿಯ ಚಾಂದನಿ ಚೌಕದಲ್ಲಿ ತಮ್ಮದೇ ಆದ ಹೋಟಲ್ ಇದೆಯಂತೆ. ಆದರೂ ಅದರ ಜೊತೆಗೆ ಈ ಸಂಚಾರಿ ಜೀವನ ಎರಡು ಲಾರಿ ಸಾಮಾನು ಸರಂಜಾಮು, ಐವತ್ತು ಸಾವಿರ ರೂಪಾಯಿಗಳಷ್ಟು ಬಂಡವಾಳ ಈ ವಿಶಾಲ ಅಂಗಡಿ ರಚಿಸುವುದು. ಅಂದಗೋಳಿಸುವುದು, ತಿಂಡಿ ತಯಾರಿಸುವುದು, ವ್ಯಾಪಾರ ಮಾಡುವುದು ಊಟ–ನಿದ್ರೆಗಳ ಪರವೆಯಿಲ್ಲದೆ ದುಡಿದರೂ ಸಾಲದು, ಮತ್ತೆ ಎಂಟು ಹತ್ತು ಜನ ಸ್ಥಳೀಯರನ್ನು ಕೂಲಿಯವರನ್ನಾಗಿ ನೇಮಿಸಿಕೊಳ್ಳುತ್ತಾರೆ. ಹಿಂದಿ ಮತ್ತು ಪಂಜಾಬಿ ಭಾಷೆ ಮಾತ್ರ ಬಲ್ಲ ಇವರು ವ್ಯವಹಾರ ಚತುರರು.

ಅಲೆಮಾರಿ ಜೀವನಕ್ಕೆ ಜಗ್ಗಿದ ಇವರು ಪಾಳೀಯ ಪ್ರಕಾರ ೫–೬ ತಿಂಗಳಿಗೊಮ್ಮೆ ದಿಲ್ಲಿಗೆ ಹೋಗಿ ಬರುತ್ತಾರೆ. ದಸರಾ ಹಬ್ಬಕ್ಕೊಮ್ಮೆ ಮಾತ್ರ ಎಲ್ಲರೂ ಸೇರಿ ದೆಹಲಿಯಲ್ಲಿ ಹಬ್ಬ ಆಚರಿಸುವ ರೂಢಿ. ಅವರು ಹೋಗಿ ಬರುವುದು ಸರಳ ಆದರೆ ದೈತ್ಯಾಕಾರದ ಅಂಗಡಿಯನ್ನು ದೆಹಲಿಗೆ ಹೊತ್ತೊಯ್ಯುವವರಾರು? ಅಂಥ ಸಮಯದಲ್ಲಿ ಜನ ಪರಿಚಯವಿರುವ ಸ್ಥಳದಲ್ಲಿ ಸಾಮಾನುಗಳನ್ನು ಗುಡ್ಡೆ ಹಾಕಿ ಹೋಗುವರು.

### ೩ : ೧ (೧೬) ಎಲ್ಲಮ್ಮ ದೇವರೋತ್ಸವ :

ಶಕ್ತಿ ದೇವತೆಯಾದ ಪಾರ್ವತಿಯ ಒಂದು ರೂಪವೇ (ಎಲ್ಲರ + ಅಮ್ಮ) ಎಲ್ಲಮ್ಮ. ಎಂಬ ಅರ್ಥದ ವಿವರಣೆ ನಿಘಂಟಿನಲ್ಲಿದೆ. (ನರಸಿಂಹಚಾರ : ೧೯೭೦ : ೧೧೦೭) ಬೀದರ ತಾಲ್ಲೂಕಿನ ಬೆನಕನಹಳ್ಳಿಯಲ್ಲಿ ಈ ಅಮ್ಮನ ಹಳೆಯ ದೇವಾಲಯವಿದೆ. ಕರ್ನಾಟಕದಲ್ಲಿ ಅಲ್ಲದೆ ಮಹಾರಾಷ್ಟ್ರ ಆಂಧ್ರಪ್ರದೇಶದ ಭಕ್ತಾದಿಗಳಿಗೆ ಇಷಾರ್ಥಗಳನ್ನು ಕೊಡುವಳೆಂದು ಹೆಸರಾಗಿರುವ ಎಲ್ಲಮ್ಮಗಳಿಗೆ ಎಲ್ಲ ಜಾತಿ ಮತ ಪಂಥದಲ್ಲೂ ಭಕ್ತರ ವರ್ಗವಿದೆ. ಪ್ರತಿ ಮಂಗಳವಾರ, ಶುಕ್ರವಾರಗಳಂದು ಉತ್ಸವ ಜರುಗುತ್ತದೆ. ಅಂದು ವಿಶೇಷ ಪೂಜೆ ಪುನಸ್ಕಾರಗಳಾಗುವುದರಿಂದ ಜನಸಂದಣಿಯು ಹೆಚ್ಚುತ್ತದೆ. ಕುರಿ–ಕೋಳಿ ಆಡು ಹೋತಗಳ ಬಲಿ ಪದ್ಧತಿ ಇಲ್ಲಿದೆ.

ಎಲ್ಲಮ್ಮ ತಾಯಿ
ಎಲ್ಲರಕ್ಕಿಂತ ದೊಡ್ಡಾಕಿ
ಬೇಡಿದ ವರವ ಕೊಡಾಕಿ

ಎನ್ನುವ ನಂಬಿಕೆ ಜನಪದರದು. ಪ್ಲೇಗು, ಸಿಡುಬು, ಕಾಲರಾ ಮುಂತಾದ ರೋಗಗಳು ಕಾಣಿಸಿಕೊಂಡರೆ ಭಕ್ತರು ಎಲ್ಲಮ್ಮಳಿಗೆ ಹರಕೆಗೈದು ಮಂಗಳವಾರ ಅಥವಾ ಶುಕ್ರವಾರದಂದು ತಾಯಿಯ ದರ್ಶನ ಪಡೆದು ಹರಕೆ ಕಾರ್ಯ ಮುಗಿಸಿ ಕೊಳದಲ್ಲಿ ಮಿಂದು ತಮ್ಮ ತಮ್ಮ ಮನೆಗೆ ಹೋಗುವ ವಿಶಿಷ್ಟ ಪರಿಪಾಠ ಇಲ್ಲಿದೆ.

ಪ್ರತಿ ಶುಕ್ರವಾರ, ಮಂಗಳವಾರ, ಅರೆಕಾಲಿಕ ಚಿಕ್ಕ ಪುಟ್ಟ ಅಂಗಡಿಗಳು, ತಲೆ ಎತ್ತುತ್ತವೆ. ಸಾವಿರಾರು ಜನರು ತಮ್ಮ ತಮ್ಮ ಹರಕೆ ಅರ್ಚನೆ ಮುಂತಾದ ಧಾರ್ಮಿಕ ವಿಧಿಗಳಲ್ಲಿಯೇ ತೊಡಗಿರುತ್ತಾರೆ. ಕೆಲವರು ತಾಯಿಯ ದೇಗುಲ ಎದುರಿನಲ್ಲಿಯೇ ಅನ್ನ, ಚಪಾತಿ, ಸಾರು ಅಡಿಗೆ ಮಾಡಿ ತಾಯಿಗೆ ಅರ್ಪಿಸಿ ಊಟ ಮಾಡುತ್ತಾರೆ. ಇನ್ನುಳಿದವರು ಮನೆಯಿಂದ ತಂದ ಬುತ್ತಿಯನ್ನು ಬಿಚ್ಚಿ ಊಟ ಮಾಡುವರು.

ಸಾಮಾಜಿಕ, ಧಾರ್ಮಿಕ, ನೈತಿಕ ದೃಷ್ಠಿಯಿಂದ ಎಲ್ಲಮ್ಮ ತುಂಬಾ ಪ್ರಭಾವ ಬೀರಿದ ಶಕ್ತಿ ದೇವತೆಯಾಗಿದ್ದಾಳೆ. ಅನೇಕ ಜಾತಿಯವರು ಪೂಜಿಸುತ್ತಾರೆ. ವೀರಶೈವರು, ಹರಿಜನರು, ಮರಾಠಿಗರು, ಎಲ್ಲಮ್ಮ ತಾಯಿಯ ಭಕ್ತರಾಗಿ ಜೋಗಯ್ಯನೋ (ಭೂತೇರ) ಆಗಿ ದೀಕ್ಷೆ ಪಡೆದುಕೊಳ್ಳುತ್ತಾರೆ. ಅವರು ಶಾಸ್ತ್ರೋಕ್ತವಾಗಿ ಮದುವೆಯಾಗುವಂತಿಲ್ಲ. ದೇವ ದಾಸಿಯರಂತೆ ನಡೆದುಕೊಳ್ಳಲು ಅವಕಾಶವಿದೆ.

### ೩ : ೧ (೧೭) ಚನ್ನಬಸವೇಶ್ವರ ಶಿವಯೋಗಿಗಳ ಉತ್ಸವ :

ಶರಣರ ನೆಲೆ ಬೀಡಾದ ಕಲ್ಯಾಣ ನಾಡಿನಲ್ಲಿ ಮಹಾಜ್ಯೋತಿಯಾಗಿ ಬೆಳಗಿದ ಹಾರಕೂಡದ ಸದ್ಗುರು ಶ್ರೀ ಚನ್ನಬಸವೇಶ್ವರ ಶಿವಯೋಗಿಗಳು ಗುಲಬರ್ಗಾ ಜಿಲ್ಲೆಯ ಮಗ್ಗಿಯಲ್ಲಿ ೧೮೫೨ರಲ್ಲಿ ಜನಿಸಿದ ಇವರು ಬಾಲ್ಯದಿಂದಲೇ ಕಾರಣಿಕ ಶಿಶುವಾಗಿ ಬೆಳೆದರು. ನಂತರ ಹಾರಕೂಡದಲ್ಲಿ ಬಂದು ನೆಲೆಸಿ ಪವಾಡ ಪುರಷರೆಂದೇ ಖ್ಯಾತರಾದರು. ಭಕ್ತರು ಮನೆ-ಮನೆಗೆ ತೆರಳಿ ಸರಳವಾದ ಭಾಷೆಯಲ್ಲಿ ದೃಷ್ಟಾಂತಗಳನ್ನು ಹೇಳುತ್ತಿದ್ದರು. ಇವರ ಭೋದನೆಗೆ ಭಕ್ತರು ದಂಗಾಗುತ್ತಿದ್ದರು. ಲಿಂಗದ ಮೇಲಿರುವ ಲಿಂಗದ ಸಂಬಂಧ ಮತ್ತು ಅದರ ಪ್ರಾಮುಖ್ಯತೆ ತಿಳಿಸಿ ಹೇಳುತ್ತಿದ್ದರು. ಶ್ರೀಗಳು ಬಿನ್ನ ಹೇಳಿದವರ ಮನೆಗೆ ಹೋಗುವಾಗ ರಸ್ತೆಯಲ್ಲಿ ಕಟ್ಟಿಗೆ ಕುಳ್ಳುಗಳನ್ನು ಆಯ್ದುಕೊಂಡು ಅವುಗಳನ್ನು ಅವರ ಮನೆಗೆ ಒಯ್ದು ಕೊಡುತ್ತಿದ್ದರು. ಗ್ರಾಮದಲ್ಲಿ ಯಾವುದೇ ಜಾತಿಯ ಜನಾಂಗದ ಒಳ ವ್ಯಾಜ್ಯಗಳಿದ್ದರೆ, ಬಗೆ ಹರಿಸುವ ಮನೋಭಾವದವರಾಗಿದ್ದರು. ಮಠಕ್ಕೆ ಹೆಚ್ಚಿನ ಆಸ್ತಿ ಪಾಸ್ತಿ ಇರಲಾರದೆಂಬ ಇವರ ಉದ್ದೇಶವಾಗಿತ್ತು. ನಾಡಿನಾದ್ಯಂತ ಸಂಚರಿಸಿ ಸದ್ ಭಕ್ತರ ಉದ್ಧಾರವೇ ತಮ್ಮ ಉದ್ಧಾರವೆಂದು ತಿಳಿದು ಮೇಲು ಕೀಳೆನ್ನದೆ ಸರ್ವರಿಗೂ ಹಿತೋಪದೇಶ ಮಾಡುತ್ತಿದ್ದರು. ೧೯೫೨ರಲ್ಲಿ ಚಿಂಚೋಳಿಯಲ್ಲಿ ಲಿಮಗೈಕ್ಯರಾದರು. ಅವರ ಪ್ರಸಾದ ಕಾಯವನ್ನು ಹಾರಕೂಡಕ್ಕೆ ತಂದು ಸಮಾಧಿ ಮಾಡಲಾಯಿತ್ತೆಂದು ಉಲ್ಲೇಖಿಸಿದ್ದಾರೆ. (ಲಠ್ಠ : ಇಸ್ವಿ ಇಲ್ಲ) ಅವರ ಲಿಂಗೈಕ್ಯ ದಿನದ ಸ್ಮರಣಾರ್ಥ ಅಂದಿನಿಂದ ಇಂದಿನವರೆಗೆ ಪ್ರತಿವರ್ಷ ಉತ್ಸವವನ್ನು ನಡೆಸಿಕೊಂಡು ಬರಲಾಗುತ್ತಿದೆ. ಬಸವಕಲ್ಯಾಣ ತಾಲ್ಲೂಕಿನ ಹಾರಕೂಡದಲ್ಲಿ ಪ್ರತಿವರ್ಷ ಜನೆವರಿಯಲ್ಲಿ ಮೂರು ದಿವಸ ಶ್ರೀ ಚನ್ನಬಸವೇಶ್ವರ ಶಿವಯೋಗಿಗಳ ಉತ್ಸವ ವೈಶಿಷ್ಟ್ಯ ಪೂರ್ಣವಾಗಿ ಜರುಗುತ್ತದೆ. ಕಲ್ಯಾಣ ಕರ್ನಾಟಕದ ಭಾಗದ ಭಾವುಕ ಭಕ್ತಾದಿಗಳಿಗೆ ಈ ಉತ್ಸವ

ಪವಿತ್ರವಾದುದು. ಈಗಿನ ಶ್ರೀಗಳಿಂದ ದೀಕ್ಷಾ ಸಂಸ್ಕಾರ ಪಡೆದುಕೊಂಡು ಪ್ರತಿಯೊಬ್ಬ ಭಕ್ತರು ಪ್ರತಿವರ್ಷದ ಉತ್ಸವದಲ್ಲಿ ಪಾಲ್ಗೊಳ್ಳುವುದು ಕಟ್ಟು ನಿಟ್ಟಾದ ನಿಯಮವಾಗಿದೆ.

ಇಂದಿನ ಶ್ರೀ ಚನ್ನವೀರ ಶಿವಾಚಾರ್ಯರರು ಕೂಡಾ ಹಿರಿಯ ಶಿವಯೋಗಿಗಳ ಆದರ್ಶ ಹಾಗೂ ತತ್ವಗಳನ್ನು ಪರಿಪಾಲಿಸಿಕೊಂಡು ಮುನ್ನಡೆಯುತ್ತಿದ್ದಾರೆ. ಸಮಾಜಧರ್ಮ ಹಾಗೂ ಅಧ್ಯಾತ್ಮ ಚಿಂತನೆಯ ಮಜಲುಗಳೊಂದಿಗೆ ಬೆಳೆಯುವಂತೆ ಭೋದನೆ ಮಾಡುತ್ತಿದ್ದಾರೆ. ಉತ್ಸವದಲ್ಲಿ ರುದ್ರಾಭಿಷೇಕ ಅಗ್ಗಿ ತುಳಿಯುವಿಕೆ ರಥೋತ್ಸವ ಅಲ್ಲದೆ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ. ಕೀರ್ತನೆ, ಭಜನೆ, ಗೀಗೀ ಮೇಳ ಸಂಗೀತ ಸಭೆಗಳೂ ಒಂದಡೆಯಾದರೆ ದನಗಳ ಪ್ರದರ್ಶನ ಜಂಗಿ ಕುಸ್ತಿಗಳು ವಿಶೇಷ ಆಕರ್ಷಣೆಗಳೆನ್ನಿಸಿವೆ. ಒಟ್ಟಾರೆ ಚನ್ನವೀರ ಶಿವಾಚಾರ್ಯ ದೇವರೋತ್ಸವ ಸಾಂಸ್ಕೃತಿಕ ಧಾರ್ಮಿಕ ಅಧ್ಯಾತ್ಮಿಕ ಪರಂಪರೆಯ ಪ್ರತೀಕವಾಗಿದೆ.

### ೩ : ೧ (೧೮) ವೀರಭದ್ರೇಶ್ವರ ದೇವರೋತ್ಸವ :

ವೀರಭದ್ರ ಶಿವ (ರುದ್ರ)ನ ಮಗ. ವೀರಶೈವ ಧರ್ಮದ ಮೂಲ ಪುರಷನು ಎಂದು ಎಂ. ಚಂದ್ರಶೇಖರ ಆರಾಧ್ಯ ಅವರು ಶ್ರೀ ವೀರೇಶ್ವಷಡ್ ಲೀಲಾದರ್ಶನದಲ್ಲಿ ಉಲ್ಲೇಖ ಮಾಡಿದ್ದಾರೆ. (ಆರಾಧ್ಯ : ೧೯೮೦ : ೧) ವೀರಭದ್ರೇಶ್ವರ ಹುಟ್ಟಿದ ಬಗ್ಗೆ ಅನೇಕ ದಂತ ಕಥೆಗಳಿವೆ. ಶಿವನ ರಕ್ಷಕರಲ್ಲಿ ವೀರಭದ್ರ ಒಬ್ಬನು. ಇವನು ಶಿವನ ಕೋಪದಿಂದಾಗಿ ಹುಟ್ಟಿ ಬಂದ. ಪಾರ್ವತಿಯು ದಕ್ಷಯಜ್ಞ ಕುಂಡದಲ್ಲಿ ಬಿದ್ದು ಮೃತಳಾದ ವಿಷಯವನ್ನು ಕೇಳಿದ ಶಿವನು ಕೋಪಗೊಂಡು ತನ್ನ ಜಡೆಯನ್ನು ನೆಲಕ್ಕೆ ಬಡಿದಾಗ ಭದ್ರ ಕಾಳಿ ಮತ್ತು ವೀರಭದ್ರನು ಹುಟ್ಟಿ ಬಂದನು.

ವೀರಭದ್ರನು ಹುಟ್ಟಿನ ಕುರಿತು ಬೇರೆ ಬೇರೆ ಅಭಿಪ್ರಾಯಗಳಿವೆ. ಮಹಾಭಾರತದ ಶಾಂತಿ ಪರ್ವತದಲ್ಲಿ ವೀರಭದ್ರನು ಶಿವನ ಬಾಯಿಂದ ಹುಟ್ಟಿ ಬಂದ ಉಲ್ಲೇಖವಿದ್ದರೆ, ವೀರಭದ್ರನು ಶಿವನ ಹಣೆಗಣ್ಣಿನಿಂದ ಉದ್ಭವಿಸುವಾಗ ಸಾವಿರ ತಲೆ, ಮೂರು ಸಾವಿರ ಕಣ್ಣು ಎರಡು ಸಾವಿರ ಕೈ ಮುಂತಾದ ಅವಯವಗಳಿಂದ ಕಾಣುತ್ತಿದ್ದನೆಂದು ಶಿವಪುರಾಣ ಮತ್ತು ಲಿಂಗಪುರಾಣ ಸಾರುತ್ತದೆ. ಇವರ ಕಾಲದ ಬಗ್ಗೆ ಚನ್ನಬಸವಣ್ಣ ತನ್ನ ವಚನದಲ್ಲಿ ತ್ರೇತಾಯುಗದವರೆಂದು (ನಾಲ್ಕು ಯುಗಗಳಲ್ಲಿ ಎರಡನೆಯ ಯುಗದವನು) ಹೇಳಿದ್ದಾರೆ.

ಒಟ್ಟಿನಲ್ಲಿ ವೀರಭದ್ರೇಶ್ವರನಿಗೆ ವೀರಶೈವ ಧರ್ಮದಲ್ಲಿ ವಿಶೇಷ ಸ್ಥಾನವಿದೆ. ದೇಶದ ಇತರ ಭಾಷೆಗಳಲ್ಲಿ ವೀರಭದ್ರೇಶ್ವರ ಕಾಣಿಸಿಕೊಂಡಿದ್ದಾನೆ. ಕರ್ನಾಟಕದ ಅನೇಕ ಊರುಗಳಲ್ಲಿ ವೀರಭದ್ರರ ದೇವಾಲಯವಿರುವಂತೆ, ಬೀದರ ಜಿಲ್ಲೆಯ, ಹುಮನಾಬಾದನಲ್ಲಿಯೂ ಇದೆ. ಪ್ರತಿವರ್ಷ ಜನೆವರಿ ೧೫ರಿಂದ ಜನೆವರಿ ೨೭ರವರೆಗೆ ಉತ್ಸವ ಅತಿ ವೈಭವದಿಂದ ಜರುಗುತ್ತದೆ.

ವೀರಭದ್ರನ ದೇವಾಲಯ :

ಈ ದೇವಾಲಯವು ಹುಮನಾಬಾದ ನಗರದ ಉತ್ತರ ದಿಕ್ಕಿನಲ್ಲಿರುತ್ತದೆ. ಈ ದೇವಾಲಯದ ನಿರ್ಮಾಣ ೧೭೨೫ರಲ್ಲಿ ಆದದ್ದು ಎಂದು ತಿಳಿದುಬರುತ್ತದೆ. ಇಲ್ಲಿಯ ವಾಸ್ತು ವಿನ್ಯಾಸ ನೋಡುಗರಿಗೆ ದಂಗು ಬಡಿಸುತ್ತದೆ. ದೇವಾಲಯ ಎತ್ತರವಾದ ಗೋಡೆಗಳಿಂದ ಕೂಡಿಕೊಂಡಿದೆ ಪ್ರವೇಶಕ್ಕೆ ಪೂರ್ವ ಹಾಗೂ ದಕ್ಷಿಣಕ್ಕೆ ಎರಡು ದ್ವಾರಗಳಿವೆ ಹತ್ತಿರದಲ್ಲಿ ತೊಟ ಕುದರೆ ಲಾಯ, ಗಜ ಶಾಲೆಗಳು ಇರುತ್ತವೆ. ಗರ್ಭಗುಡಿಯಲ್ಲಿ ೩ ಅಡಿ ಎತ್ತರದಲ್ಲಿ ಕರಿಶಿಲೆಯ ಕಟ್ಟೆಯ ಮೇಲೆ ಸುಮಾರು ೫ ಅಡಿ ಎತ್ತರದ ನುಣುಪಾದ ಕರಿಶಿಲೆಯ ವೀರಭದ್ರನ ಮೂರ್ತಿ ನೋಡಲು ಮೋಹಕವಾಗಿದೆ. ಕೈಯಲ್ಲಿ ಖಡ್ಗ ಹಿಡಿದು ನಿಂತಿದ್ದಾನೆ.. ಬಲಭಾಗದಲ್ಲಿ ದಕ್ಷ ಬ್ರಹ್ಮ ಕೈ ಜೋಡಿಸಿ ನಿಂತಿದ್ದಾನೆ. ಬೆಳ್ಳಿಯ ಮುಖವಾಡ ಹೊತ್ತು ನಿಂತ ವೀರಭದ್ರನ ಅವಯವಗಳು ಕೂಡ ಬೆಳ್ಳಿಯ ಮೆಲು ಹೊದಿಕೆಗಳಾಗಿವೆ.

ದೇವರೋತ್ಸವ :

ಪ್ರತಿವರ್ಷ ವೀರಭದ್ರೋತ್ಸವ ಜನೆವರಿ ೧೫ರಂದು ಆರಂಭವಾಗಿ ಜನೆವರಿ ೩೦ರವರೆಗೆ ಮುಂದುವರಿಯುತ್ತದೆ. ಈ ಉತ್ಸವ ಪ್ರಾರಂಭವಾಗುವ ಮೊದಲೆ ದೇವಾಲಯಕ್ಕೆ
ಸುಣ್ಣ–ಬಣ್ಣ ಬಳಿದು, ದೇವಾಲಯ ಸ್ವಚ್ಛಗೊಳಿಸುತ್ತಾರೆ. ಭಕ್ತರಿಂದ ಅಥವಾ ಇನ್ನಾರಿಂದಾಗಲಿ ಚಂದಾಹಣ ಕೂಡಿಸುವ ಸಂಪ್ರದಾಯ ಇಲ್ಲಿಲ್ಲ. ಭಕ್ತರೆ ಸ್ವತಃ ಬಂದು ದವಸ ಧಾನ್ಯಗಳು ಕೊಟ್ಟು ಹೋಗುತ್ತಾರೆ. ಇಲ್ಲವೆ ಸಾಧ್ಯವಾದಷ್ಟು ನಗದು ಹಣ ಕಾಣಿಕೆ ಹುಂಡಿಯಲ್ಲಿ ಹಾಕುತ್ತಾರೆ. ಹೀಗೆ ಬಂದಂಥ ಹಣ ದವಸ ಧಾನ್ಯಗಳು ಉತ್ಸವದ ಸಂದರ್ಭದಲ್ಲಿ ಉಪಯೋಗಕ್ಕೆ ಬಳಸಿಕೊಂಡು ವೈಭವಪೂರ್ಣ ಉತ್ಸವ ನೆರವೇರಿಸುತ್ತಾರೆ.

ಹುಮನಾಬಾದ ಶ್ರೀ ವೀರಭದ್ರೇಶ್ವರ ಉತ್ಸವ ಸಂದರ್ಭದಲ್ಲಿ ಈ ಕೆಳಕಂಡ ಪ್ರಮುಖ ಆಚರಣೆಗಳು ಜರುಗುತ್ತವೆ.

೧) ಕೀರ್ತನ – ಗಾಯನ (೨) ಉಚಾಯಿ ಮೆರವಣಿಗೆ (೩) ಆನೆಯ ಮೆರವಣಿಗೆ (೪) ಅಗ್ನಿಪೂಜಾ (೫) ರಥೋತ್ಸವ (೬) ಕುಸ್ತಿಯಾಟ (೭) ಸಮಯ ರೋಶನಿ ಮತ್ತು ದರಬಾರ ಇತ್ಯಾದಿ

೧) ಕೀರ್ತನ – ಗಾಯನ :

ಉತ್ಸವದ ಸಂದರ್ಭದಲ್ಲಿ ಪ್ರತಿದಿನ ಕೀರ್ತನೆ ಗಾಯನ ಕಾರ್ಯಕ್ರಮವಿರುತ್ತದೆರ ಧಾರವಾಡ, ಬೆಂಗಳೂರು, ಬಸವಕಲ್ಯಾಣ, ಹುಲಸೂರು, ಮುಂತಾದ ಕಡೆಗಳಿಂದ ಕೀರ್ತನೆಕಾರರು ಮತ್ತು ಗಾಯಕರನ್ನು ಕರೆಸಿಕೊಳ್ಳುತ್ತಾರೆ. ಅವರಿಗೆ ತಕ್ಕ ಸಂಭಾವನೆಯನ್ನು ಇರುತ್ತದೆ.

ಅಕ್ಕಮಹಾದೇವಿ, ಬಸವಣ್ಣ, ಚನ್ನಬಸವಣ್ಣ ಮುಂತಾದವರ ಕುರಿತ ಕೀರ್ತನೆ ಹೇಳುತ್ತಾರೆ. ಅನಂತರ ಕರ್ನಾಟಕ ಹಿಂದೂಸ್ತಾನಿ ಸಂಗೀತ ಮತ್ತು ಗಾಯನ ಇರುತ್ತದೆ. ಇಲ್ಲಿಯ ಸಂಗೀತ ನಿದ್ರೆಯಲ್ಲಿದ್ದವರಿಗೆ ಬಡಿದೆಬ್ಬಿಸುವಂತಿರುತ್ತದೆಂದು ದೇವಾಲಯ ಪೂಜಾರಿ (ಭಕ್ತ) ಬಸವಣ್ಣನವರು ಹೇಳುತ್ತಾರೆ.

೨) ಉಚಾಯಿ ಮೆರವಣಿಗೆ :

ರಥೋತ್ಸವ ಜರುಗುವ ಐದು ದಿನಗಳ ಮೊದಲೆ ಸಣ್ಣ ತೇರೊಂದನ್ನು ಜಗ್ಗುವರು. ಇದಕ್ಕೆ 'ಉಚಾಯಿ ಮೆರವಣಿಗೆ' ಎಂದು ಕರೆಯುತ್ತಾರೆ. ಈ ಉಚಾಯಿ ಮೆರವಣಿಗೆ ದೇವಾಲಯದಿಂದ ಬಸವೇಶ್ವರ ಚೌಕಿನವರೆಗೆ ಇರುತ್ತದೆ. ಈ ಸಣ್ಣ ತೇರಿನ ವೀರಭದ್ರೇಶ್ವರ ವಿಗ್ರಹದ ಜೊತೆಗೆ ಸ್ವಾಮಿಯನ್ನು ಕೂಡುಸುತ್ತಾರೆ. ಉಚಾಯಿ ಜಗ್ಗುತ್ತಾರೆ. ಪುರವಂತರ ಕುಣಿತ, ಶಸ್ತ್ರ ಹಾಕಿಕೊಳ್ಳುವದು ಕಣ್ಣಿಗೆ ಕಟ್ಟಿದಂತಿರುತ್ತದೆ. ರಸ್ತೆಯ ಅಕ್ಕ-ಪಕ್ಕದಲ್ಲಿರುವ ಮನೆಯ ಸುಮಂಗಲೆಯರು ಉಚಾಯಿಗೆ ಮಂಗಳಾರತಿ ಮಾಡುತ್ತಾರೆ. ತೆಂಗು ಒಡೆಯುತ್ತಾರೆ. ಶಲ್ಯ ಹಾಕುವರು ದರ್ಶನ ಪಡೆದುಕೊಳ್ಳುವರು.

೩) ಆನೆಯ ಮೆರವಣಿಗೆ :

ಇದು ಜೀವಂತ ಆನೆಯ ಮೆರವಣಿಗೆ ಅಲ್ಲ, ಕೈಯಿಂದ ಮಾಡಿದ ದೊಡ್ಡ ಗಾತ್ರದ ಆನೆ ಇಲ್ಲಿದೆ. ಈ ಆನೆಯ ಮೇಲೆ ಈ ದೇವಾಲಯ ಪುನರ ನಿರ್ಮಾಣ ಮಾಡಿದ ರಾಜಚಂದ್ರಸೇನ ಜಾಧವನ ಪ್ರತೀಕವಾದ ಮೂರ್ತಿ ಇಲ್ಲಿದೆ. ಅದನ್ನು ಎತ್ತಿನ ಬಂಡಿಯ ಮೇಲಿಟ್ಟು ಉತ್ಸವ ಜರುಗುವ ಪ್ರತಿದಿನ ದೇವಾಲಯದಿಂದ ಬಸವೇಶ್ವರ ಚೌಕ ಹಾಗೂ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಕೊಂಡೊಯ್ಯುತ್ತಾರೆ. ಭಜನೆ ಪುರವಂತರ ಕುಣಿತ, ಡೊಳ್ಳು, ಹಲಗೆ, ಬ್ಯಾಂಡು ಮುಂತಾದ ತಂಡಗಳು ಮೆರವಣಿಗೆಯಲ್ಲಿ ಭಾಗವಹಿಸುತ್ತವೆ.

೪) ಅಗ್ನಿಪೂಜೆ :

ಇದಕ್ಕೆ 'ಅಗಿ' ತುಳಿಯುವುದು ಎನ್ನುತ್ತಾರೆ. ಹರಕೆ ಹೊತ್ತ ಭಕ್ತರು ಸೌಧೆಗಳನ್ನು ಖರೀದಿಸಿ ಬೆಂಕಿಯ ಕೆಂಡದಲ್ಲಿ ಒಂದೊಂದು ಕಟ್ಟಿಗೆಯನ್ನು ಹಾಕುತ್ತ ಕೊಂಡದ ಸುತ್ತಾಕುವರು. ಹೀಗೆ ೫-೧೧ ಇಲ್ಲವೆ ೨೧ ಸುತ್ತಾಕಿ ವೀರಭದ್ರನ ದರ್ಶನ ಪಡೆದುಕೊಳ್ಳುತ್ತಾರೆ. ಹೀಗೆ ಮಾಡುವದರಿಂದ ವರ್ಷದಲ್ಲಿ ತಾನು ಮಾಡಿದ ಪಾಪಕರ್ಮಗಳೆಲ್ಲ ಸುಟ್ಟು ಹೋಗುತ್ತವೆಂಬ ಜನಪದ ನಂಬಿಕೆ ಇದೆ. ಇಂಥ ಸಮಯದಲ್ಲಿ ಎಲ್ಲೆಲ್ಲಿಯೋ ಇದ್ದಿರುವ ಪುರವಂತರೆಲ್ಲ ಉತ್ಸವದ ದಿನ ಇಲ್ಲಿ ಕೂಡುತ್ತಾರೆ. ಪುರವಂತರ ಅವತಾರ ವೀರಭದ್ರ ದೇವತೆ ಸ್ವರೂಪ ಎನ್ನಲಾಗಿದೆ. ಪುರವಂತರ ಆಟ ಜನರ ಕಣ್ಮನವನ್ನು ತಣಿಸುವಂತಿರುತ್ತದೆ. ಬೆಳಗಾಗುವರೆಗೆ ಜನರಿಗೆ ರಂಜನೆ ನೀಡುತ್ತ ವೀರಭದ್ರನ ಒಡಪುಗಳನ್ನು ಹೇಳುತ್ತಾರೆ

ಹೀಗೆ ಪುರವಂತರು ಹಲವಾರು ವೀರಭದ್ರ ದೇವರ ಒಡಪುಗಳಲ್ಲಿ ಆತನ ಮಹಿಮೆ ರೌದ್ರತೆ ಭೀಕರತೆಯನ್ನು ಸಂಕೇತಿಸುವ ಗದ್ಯದ ತುಣುಕುಗಳಾಗಿ ಅವರ ಬಾಯಿಂದ ಹೊರಬೀಳುವುದು. ಆಗಾಗ ಅಂಗಾಂಗಗಳಲ್ಲಿ ಅಸ್ತ್ರಗಳನ್ನು ಚುಚ್ಚಿಕೊಳ್ಳುವರು. ಶಸ್ತ್ರ ಏರಿಸಿದ ಸ್ಥಳದಲ್ಲಿ ಸ್ವಲ್ಪಾದರೂ ರಕ್ತ ಕಾಣಿಸಿಕೊಂಡರೆ, ಆ ಶಸ್ತ್ರ ಹೊರತೆಗೆದು ಅಲ್ಲಿ ಭಸ್ಮವನ್ನು ಹಾಕಿಕೊಂಡು ಮತ್ತೆ ಕುಣಿಯುತ್ತಾರೆ.

೫) ರಥೋತ್ಸವ :

ಹುಮನಾಬಾದ ವೀರಭದ್ರೇಶ್ವರ ರಥೋತ್ಸವ ಬೀದರ ಜಿಲ್ಲೆಯಲ್ಲಿ ನಡೆಯುವ ರಥೋತ್ಸವದಲ್ಲಿ ಅತಿ ಪ್ರಮುಖವಾಗಿದೆ. ತೇರಿನಲ್ಲಿ ವೀರಭದ್ರೇಶ್ವರ ಹಾಗೂ ಕಾಳಮ್ಮನ ವಿಗ್ರಹಗಳು ಇಟ್ಟಿರುತ್ತಾರೆ. ಹಿರೇಮಠದ ಸ್ವಾಮಿ ಕುಳಿತಿರುತ್ತಾರೆ. ತಳಿರು ತೋರಣ, ಕಬ್ಬು, ದೀಪಾಲಂಕಾರ ಮಾಡಿದ ತೇರನ್ನು ಎಳೆಯಲು ಭಕ್ತರು ನಾಮುಂದೆ ತಾಮುಂದೆ ಎನ್ನುವರು. ತೇರು ಎಳೆಯುವಾಗ ಯಾವುದೇ ಅನಾಹುತಗಳಾಗಬಾರದೆಂಬ ಕಾಣದಿಂದಾಗಿ ಒಂದು ಬಂಡಿ ಅನ್ನ ತೇರಿನ ಮುಂದರೆ ಹಾಕಿ ಕಟ್ಟಿರುತ್ತಾರೆ. ಅದಕ್ಕೆ 'ಭೂಮಾ' ಎನ್ನುವರು.

ರಥೋತ್ಸವ ಸಂದರ್ಭದಲ್ಲಿ ತೇರಿನತ್ತ ಬಾಳೆಹಣ್ಣು, ಖಾರಿಕ, ಬಾದಮಿ ಮುಂತಾದವುಗಳು ಭಕ್ತರು ಎಸೆಯುತ್ತಾರೆ. ಅದನ್ನು ಹಿಡಿದು ತಿಂದರೆ ಪಾಪಕರ್ಮಗಳೆಲ್ಲ ದೂರವಾಗುತ್ತವೆಂಬ ನಂಬಿಕೆಯಿಂದ ಇನ್ನುಳಿದ ಭಕ್ತರು ಹಿಡಿದು ತಿನ್ನಲು ಯತ್ನಿಸುವರು. ರಥೋತ್ಸವ ಎಳೆಯುವಾಗ ಭಕ್ತರೆಲ್ಲ ಕಂಡು ಬರುವ ಉತ್ಸಾಹ ಹೇಳತೀರದು ಅವರ ಕೇಕೆ ಬಗ್ಗೆ ಮುಗಿಲು ಮುಟ್ಟುವಂತಿರುತ್ತಾರೆ.

ಇನ್ನೊಂದು ಕಡೆ ಮದ್ದು ಸುಡುವ ಕಾರ್ಯ ಕ್ರಮವಿರುತ್ತದೆ. ಇದನ್ನು ಬೆಳಕಿನ ಪ್ರತೀಕ ಎನ್ನಲಾಗಿದೆ. ಸುಮಾರು ಒಂದೆರಡು ಗಂಟೆಗಳ ಕಾಲ ವಿವಿಧ ಮಾದರಿಯ ಚಪಾಕಿಗಳನ್ನು ಹಚ್ಚುತ್ತಾರೆ. ಕಣ್ಣಿಗೆ ವಿವಿಧ ಬಣ್ಣದ ಬೆಳಕನ್ನು ಕೊಡುತ್ತದೆ. ಐವತ್ತು ಸಾವಿರಕ್ಕೂ ಹೆಚ್ಚು ಮೊತ್ತದ ಮದ್ದು ಗುಂಡುಗಳನ್ನು ಸುಡುವ ಪರಿಪಾಠ ಇಲ್ಲಿದೆಯೆಂದು ದೇವಾಲಯದ ಪೂಜಾರಿ ಸ್ವಾಮಿ ಹೇಳುತ್ತಾರೆ. ಇನ್ನು ತೇರು ದೇಹದ ಸ್ವರೂಪ ಎನ್ನಲಾಗಿದೆ. ಇಹಲೋಕದಿಂದ ಪರಲೋಕಕ್ಕೆ ಸೇರುವ ಪ್ರತೀಕವೇ ತೇರು. ಹೀಗಾಗಿಯೇ ರಥೋತ್ಸವಗಳ ಅವಶ್ಯಕತೆ ಇವತ್ತಿಗೂ ಜರೂರಿ ಎನ್ನುತ್ತಾರೆ. ಈ ದೇವಸ್ಥಾನದ ಅರ್ಚಕರು.

೬) ಕುಸ್ತಿಯಾಟ :

ಉತ್ಸವ ಎಂದ ಬಳಿಕ ಸಾವಿರಾರು ಜನರು ಬಂದು ಸೇರುವುದ ಸಹಜ. ದೇವರ ದರ್ಶನ ಪಡೆದು ಬಂಧು-ಬಳಗದವರು ಸ್ನೇಹಿತರು ಮುಂತಾದವರ ತನಿಖೆ ನಡೆಸಿ ಭೆಟ್ಟಿಯಾಗಲು ಹಾತೋರಿಯುತ್ತಾರೆ. ಇದೆಲ್ಲ ಒಂದು ಎರಡು ಗಂಟೆಯವರೆಗೆ ನಡೆಯುವ ಮಾತು. ಉತ್ಸವ ೩-೪ ದಿನಗಳಿಂದ ತಿಂಗಳು ಗಟ್ಟಲೇ ಜರುಗುವ ದೇವರೋತ್ಸವಗಳಿವೆ. ಹೀಗಾಗಿ ಉತ್ಸವಕ್ಕೆ ಬಂದ ಭಕ್ತರಿಗಾಗಿ ದಿನಕ್ಕೊಂದರಂತೆ ಹೊಸ-ಹೊಸ ಆಟ ಪಾಠಗಳು

ಬೇಕು. ಅವಶ್ಯವಿರುವ ಪದಾರ್ಥಗಳು ಕೊಳ್ಳಲು ಅಂಗಡಿ ಮುಗಟ್ಟುಗಳು ಅವಶ್ಯ. ಹೀಗಾಗಿಯೇ ಉತ್ಸವ ಜರುಗುವಾಗ ಹತ್ತೆಂಟು ಪ್ರಕಾರದ ಕಾರ್ಯಕ್ರಮಗಳಲ್ಲಿ ಒಂದಾದ ಕುಸ್ತಿಯಾಟ. ಇದು ಶಕ್ತಿ ಮತ್ತು ಯುಕ್ತಿಯ ಪ್ರತೀಕ. ಈ ಉತ್ಸವದಲ್ಲಿ ನೆರವೇರುತ್ತಾರೆ.

ಸಾಂಗ್ಲಿ, ಸೊಲ್ಲಾಪುರ, ಹೈದ್ರಬಾದ, ಬೀದರ, ಬಿಜಾಪುರ ಮುಂತಾದ ಕಡೆಗಳಿಂದ ಕುಸ್ತಿ ಪಟುಗಳು ಬರುತ್ತಾರೆ. ಬಂದವರು ಕುಸ್ತಿಯಾಟದ ವ್ಯವಸ್ಥಾಪಕನಲ್ಲಿ ಹೆಸರು ನೊಂದಣಿ ಮಾಡಬೇಕಾಗುತ್ತದೆ. ವ್ಯವಸ್ಥಾಪಕನ ನಿರ್ದೇಶನದಂತೆ ಕುಸ್ತಿಯಾಟದಲ್ಲಿ ಭಾಗವಹಿಸಿ ಕುಸ್ತಿ ಆಡಬೇಕು. ಆಟದಲ್ಲಿ ಗೆದ್ದವರಿಗೆ ನಗದು ಬಹುಮಾನ ಇಲ್ಲವೆ 'ಬೆಳ್ಳಿಕಡಗ' ಉಡುಗೊರೆಯಾಗಿ ಕೊಡುವ ಪದ್ಧತಿ ಇಲ್ಲಿದೆ.

೭) ಸಮಯ ರೋಶನಿ ಮತ್ತು ದರಬಾರ :

ಇದು ಉತ್ಸವದ ಕೊನೆಯ ದಿನದ ವಿಶಿಷ್ಟ ಕಾರ್ಯಕ್ರಮ. ಉತ್ಸವ ಯಶಸ್ವಿಗೊಳಿಸಲು ದುಡಿದ ಮಹಾನುಭಾವರಿಗೆ ಗೌರವಧನ ಕೊಟ್ಟು ಧನ್ಯವಾದಗಳನ್ನು ಹೇಳುವುದೇ 'ಸಮಯ ರೋಶನಿ ದರಬಾರ' ಎಂದು ಕರೆಯಲಾಗಿದೆ. ಈ ದರಬಾರ ಕಾರ್ಯಕ್ರಮ ಮುಂಜಾನೆ ೧೦-೧೧ ಗಂಟೆ ಸುಮಾರಿಗೆ ಸುರುವಾಗಿ ರಾತ್ರಿ ೧೦-೧೧ಗಂಟೆಗೆ ಮುಕ್ತಾಯಗೊಳ್ಳುತ್ತದೆ. ದೇವಾಲಯದ ಸಮಿತಿಯವರು ಗಣ್ಯವ್ಯಕ್ತಿಗಳಿಗೆ ಆಹ್ವಾನಿಸಿ ಅವರ ಸಾನಿಧ್ಯದಲ್ಲಿ ದರಬಾರ ಸಮಾರಂಭ ಏರ್ಪಡಿಸುತ್ತಾರೆ. ಉತ್ಸವದಲ್ಲಿ ಭಾಗವಹಿಸಿದ ವಾದ್ಯ ಪರಿಕರ ಕಲಾವಿದರಿಗೆ, ಗಾಯಕರಿಗೆ ಮುಂತಾದವರಿಗೆ ವೇದಿಕೆ ಮೇಲೆ ಕರೆದು ಕಾಣಿಕೆ ಹಣ ಕೊಟ್ಟು ಬೆನ್ನು ತಟ್ಟುತ್ತಾರೆ. ಸಾಧು ಸಂತರಿಗೆ ಸನ್ಮಾನಿಸುತ್ತಾರೆ. ಕೊನೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ದುಡಿದು ಎಲ್ಲರಿಗೂ ಧನ್ಯವಾದಗಳು ಹೇಳಿ ಈ ಕಾರ್ಯಕ್ರಮ ಮಂಗಲಮಯಗೊಳಿಸುವುದುಂಟು.

೩ : ೧ (೧೯) ಮಾರಮ್ಮನ ಉತ್ಸವ :

ರಾಜಗೀರಾ ಬೀದರ ತಾಲ್ಲೂಕಿನ ಒಂದು ಚಿಕ್ಕ ಹಳ್ಳಿ. ಈ ಗ್ರಾಮದ ನಡುವೆ ಮಾರಿ ದೇವತೆಯ ಚಿಕ್ಕ ದೇವಾಲಯವಿದೆ. ಮರಗಮ್ಮ, ಮಾರಮ್ಮಾ ಮಾರಿ ಎನ್ನುವ ವಿವಿಧ ಹೆಸರುಗಳು ಈ ದೇವತೆಗಿದೆ. ಈ ಅಮ್ಮನ ಉತ್ಸವ ಮೂರು ವರ್ಷಕ್ಕೊಮ್ಮೆ ಜರುಗುತ್ತದೆ. ವರ್ಷದ ಬಾದಾಮಿ ಅಮವಾಸ್ಯೆವಾಗಿ ಬರುವ ಮೊದಲನೆಯ ಮಂಗಳವಾರ ದಿವಸದಂದು ಉತ್ಸವ ಪ್ರಾರಂಭವಾಗುತ್ತದೆ. ಉತ್ಸವಕ್ಕೆ ರಾಜಗೀರಾ ಸುತ್ತ-ಮುತ್ತಲಿನ ಗ್ರಾಮಸ್ಥರು ಬರುತ್ತಾರೆ. ಉತ್ಸವದ ದಿನಗಳಲ್ಲಿ ಮರಗಮ್ಮನಿಗೆ ಒಂದು ಕೋಣ ನೂರಾರು ಕುರಿ ಮರಿಗಳು, ಬಲಿಕೊಡುವ ಪದ್ಧತಿ ಇದೆ.

ಬೀದರ ಜಿಲ್ಲೆಯ ಪ್ರತಿಯೊಂದು ಹಳ್ಳಿಯಲ್ಲಿ ಒಂದಾದರೂ ಗ್ರಾಮ ದೇವತೆ ಇದ್ದೇ ಇದೆ. ಸಣ್ಣ ಅಥವಾ ದೊಡ್ಡ ಪ್ರಮಾಣದಲ್ಲಿ ಉತ್ಸವ ನಡದೇ ಇರುತ್ತದೆ. ರಾಜಗೀರಾ ಹಳ್ಳಿಯ ಮಾರಮ್ಮನ ಉತ್ಸವ ಮಾತ್ರ ವಿಶೇಷವಾಗಿದೆ. ಉತ್ಸವಕ್ಕೆ ತಗಲುವ ವೆಚ್ಚ ಗ್ರಾಮಸ್ಥರೇ ವಹಿಸಿಕೊಳ್ಳುತ್ತಾರೆ. ಹಣದ ಹೊರೆಯೆಂದು ಭಾವಿಸದೇ ಗೌರವದಿಂದ ಹಣ ಕೊಡುತ್ತಾರೆ.

ಚಂದಾ ಮಾಡುತ್ತಾರೆ. ದವಸ–ಧಾನ್ಯಗಳು ಸಂಗ್ರಹಿಸಿ ಕೊಡುತ್ತಾರೆ. ಈ ಉತ್ಸವದ ಸ್ವರೂಪ ಈ ರೀತಿಯಾಗಿದೆ.

ಮಾರಮ್ಮ ತಾಯಿಗೆ ಕೋಣ ಕುರಿ ಮೇಕೆಗಳ ಬಲಿ. ಅರಿಕೆ ಹಾಕುವುದು, ಮೇಲೆ ದೀಪ, ಲಗ್ನ ಮಾತಂಗಿ ಸೇವೆ, ಹಲಸುಗಾವ ಭೂಮಿ ತಾಯಿಗೆ ಹೆಪ್ಪು ಕೊಡುವುದ, ದೇವಿಗೆ ವಿಧವೆಯ ವೇಷ ತೊಡಿಸುವುದು ಕನ್ಯೆಯಾಗಿ ದೇವಿಯನ್ನು ನೆಲೆಗೊಳಿಸುವುದು. ಇತ್ಯಾದಿ ಲಕ್ಷಣ ಪಡೆದಿರುತ್ತದೆ. ಉತ್ಸವ ಸಂಪೂರ್ಣವಾಗಿ ಜಾನಪದ ಇತಿಹಾಸದ ರೀತಿಯಲ್ಲಿ ಜರುಗುತ್ತದೆ. ಜಾತ್ರೆಯ ಅಂಕೆ ಹಾಕುವ ಚಡಂಗವು ಮದುವೆಯ ವಾಗ್ದಾನದಂತಿದೆ. ಅಂದು ಅಸಾದಿಗಳಿಗೆ ಪ್ರಮುಖ ಸ್ಥಾನ ಪಟ್ಟದ ಕೋಣನಿಗೆ ಊರ ಪ್ರಮುಖರಿಗೆ ಅಗಾದಿಗಳು ಕಂಕಣವನ್ನು ಕಟ್ಟಿ ತಾವು ಕಂಕಣ ಬದ್ಧರಾಗುತ್ತಾರೆ. ಮಾರಮ್ಮನ ಲಗ್ನ ಮಾಡುವರು.

## ಅಧ್ಯಾಯ : ನಾಲ್ಕು

## ಬೀದರ ಜಿಲ್ಲೆಯ ಪ್ರದರ್ಶನ ಕಲೆ-ದೇವರೋತ್ಸವಗಳು

೪ : ೧) ಹಲಗೆ ಮೇಳ

೪ : ೨) ಭೂತೇರು

೪ : ೩) ಜಾತಗಾರರು

೪ : ೪) ಬಾಳಸಂತೂರ

೪ : ೫) ಕೋಲಾಟ

೪ : ೬) ಭಜನಾ ಮೇಳ

೪ : ೭) ಬುಡ ಬುಡಿಕೆ

೪ : ೮) ಡೊಂಬರು

೪ : ೯) ಪುರವಂತರ ಕುಣಿತ

೪ : ೧೦) ಬುರ್ ಬುರ್ ಪೋಚಮ್ಮ

೪ : ೧೧) ಹಾವಾಡಿಗರು

೪ : ೧೨) ನಂದಿಕೋಲ ಕುಣಿತ

೪ : ೧೩) ಬಹುರೂಪಿ

## ಬೀದರ ಜಿಲ್ಲೆಯ ಪ್ರದರ್ಶನ ಕಲೆ –ದೇವರೋತ್ಸವಗಳು

ಪ್ರೇಕ್ಷಕರ ಸಮ್ಮುಕದಲ್ಲಿ ಹತ್ತಾರು (ಕಲಾತಂಡದ) ಜನರೆಲ್ಲ ಸೇರಿ ಸಂಗೀತ, ನೃತ್ಯ ಮತ್ತು ಅಭಿನಯದ ಮೂಲಕ ಹಾಡಿ–ಪಾಡಿ, ಕುಣಿದು ಕುಪ್ಪಳಿಸುವ ವಿಧಾನವೇ 'ಪ್ರದರ್ಶನ ಕಲೆ', ಭಜನೆ, ಡೊಳ್ಳು, ಪುರವಂತಿಕೆ, ಕೋಲಾಟ, ಹಲಗೆ ಮುಂತಾದ ಕಲೆಗಳು ಪ್ರದರ್ಶನದ ವ್ಯಾಪ್ತಿಗೆ ಒಳಪಡುತ್ತವೆ. ಅವು ಮನೋರಂಜನೆಯಲ್ಲದೆ, ಮನಸ್ಸಿಗೆ ನೆಮ್ಮದಿಯನ್ನು ಕೊಡುತ್ತವೆ. ಸಾರ್ವಜನಿಕರ ಮನಸ್ಸನ್ನು, ಕೌಟುಂಬಿಕ ಕಷ್ಟ ದುಃಖಗಳಿಂದ ದೂರ ಮಾಡಿ ಅದನ್ನು ಸುಲಭಗೊಳಿಸಿ ಶಾಂತಿ ಸಮಾಧಾನ ಸಂತೃಪ್ತಿಯನ್ನು ತಂದುಕೊಡುತ್ತವೆ. ಹೀಗಾಗಿಯೇ 'ಪ್ರದರ್ಶನ ಕಲೆಗಳು' ದೇವರೋತ್ಸವಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿವೆ.

ದೇವರೋತ್ಸವಗಳೆಂದ ಬಳಿಕ ಹತ್ತಾರು ಕಡೆಗಳಿಂದ ಜನರು ಬಂದು ಸೇರುತ್ತಾರೆ. ದೇವರೋತ್ಸವಗಳು ಎರಡು–ಮೂರು, ಏಳು; ಹದಿನೈದು ದಿನ ಮತ್ತು ತಿಂಗಳವರೆಗೆ ಜರುಗುತ್ತವೆ. ಅಲ್ಲಿ ಸೇರಿರುವ ಭಕ್ತರು ಮನರಂಜನೆ, ನೋಡಲು, ಒಳ್ಳೆ ವಿಚಾರಗಳನ್ನು ಕೇಳಲು ಹಾತೊರೆಯುತ್ತಾರೆ. ಹೀಗಾಗಿಯೇ ಉತ್ಸವದ ಸಮಿತಿಯವರು ಕಲಾತಂಡದವರಿಗೆ ಆಹ್ವಾನಿಸುತ್ತಾರೆ. ವಿದ್ವಾಂಸರಿಂದ ವಿಚಾರ ಸಂಕೀರಣ ಸಂವಾದ ನಡೆಸುವರು. ಉತ್ಸವಕ್ಕೆ ಬಂದ ಭಕ್ತರಲ್ಲಿರುವ ಮೂಢನಂಬಿಕೆಗಳು ಅಡಗಿಸಲು ಶೀಲ, ಧರ್ಮ, ಸಹಬಾಳ್ವೆ, ನ್ಯಾಯ ಅವರಲ್ಲಿ ಹುಟ್ಟಿಸಲು ಕಲಾ ತಂಡದವರಿಂದ ಹಾಡುಗಳನ್ನು ಹಾಡಿಸುತ್ತಾರೆ. ವಿದ್ವಾಂಸರಿಂದ ನೀತಿಯ ಭೋದನೆ ಮಾಡಿಸುತ್ತಾರೆ. ಈ ಸಂಪ್ರದಾಯ ಪುರಾತನ ಕಾಲದಿಂದಲೂ ಬೆಳೆದು ಬಂದಿದೆ.

ಬೀದರ ಜಿಲ್ಲೆಯಲ್ಲಿ ಪ್ರದರ್ಶಿಸಲ್ಪಡುವ ಪ್ರದರ್ಶನ ಕಲೆಗಳು ಮೂರು ಉದ್ದೇಶಗಳಿಂದ ನೆರವೇರುತ್ತವೆ. ಒಂದು ಮನರಂಜನೆ, ಇನ್ನೊಂದು ಉಪಜೀವನ (ವೃತ್ತಿ) ಮತ್ತು ಆರಾಧನೆ ಹಿನ್ನಲೆಯಾಗುತ್ತದೆ.

ನಮ್ಮ ನಾಡಿನಲ್ಲಿ ಯಾವುದೇ ಉತ್ಸವ ಜರುಗಲಿ ಅಲ್ಲಿ ಒಂದಾದರೂ ಪ್ರದರ್ಶನ ಕಲೆ ಇದ್ದೇ ಇರುತ್ತದೆ. ಬೀದರ ಜಿಲ್ಲೆಯಲ್ಲಿ ನಡೆಯುವ ದೇವರೋತ್ಸವಗಳಲ್ಲಿ ಪ್ರದರ್ಶನ ಕಲೆಗಳ ಕುರಿತಂತೆ ವಿಶೇಷವಾಗಿ ಗಮನಿಸಲಾಗಿ ಆಯಾ ಉತ್ಸವಗಳಲ್ಲಿ ಪ್ರತಿನಿಧಿಸುವಂತಹ ಪ್ರಮುಖ ಜನಪದ ಕಲೆಗಳು ಹೀಗಿವೆ.

### 4 : 1) ಹಲಗೆ ಮೇಳ :

ಹಲಗೆ ಒಂದು ಚರ್ಮವಾದ್ಯ. ಈ ಮೇಳದಲ್ಲಿ ನಾಲ್ವರಿಂದ ಐದು ಜನ ಕಲಾವಿದರಿರುತ್ತಾರೆ. ಇಬ್ಬರು ಹಲಗೆ ಭಾರಿಸುತ್ತಾರೆ. ಒಬ್ಬ ಟಕಾರಿಸುತಿ ಊದಿದರೆ ಇನ್ನೊಬ್ಬ ಶಹನಾಯಿ ನುಡಿಸುತ್ತಾರೆ. ಮತ್ತೊಬ್ಬ ಬಾರಿಸುವನು. ಬೀದರಿನ ಮಡಿವಾಳೇಶ್ವರ ಉತ್ಸವ, ವಿಠ್ಠಲನ ಉತ್ಸವ, ಹುಮನಾಬಾದ ವೀರಭದ್ರೇಶ್ವರ ದೇವರೋತ್ಸವದ ಮೆರವಣಿಗೆಯಲ್ಲಿ ಹಲಗೆ

ಮೇಳಗಳು ಭಾಗವಹಿಸುತ್ತವೆ. ಈ ವಾದ್ಯವನ್ನು ನುಡಿಸುವರು ಕೆಳವರ್ಗದ ಜನರೇ ಆಗಿರುತ್ತಾರೆ.

4 : 2) ಭೂತೇರು :

ಕೈಯಲ್ಲಿ ಧೂಪ(ದೀವಟಿಗೆ) ಹಿಡಿದುಕೊಂಡು ಹಾಡುವ ಗಾಯಕರೇ ಧೂಪೇರು. ಕಾಲಬದಲಾದಂತೆ ಧೂಪೇರ ಪದ ಮಾಯವಾಗಿ 'ಭೂತೇರ' ಆಗಿರಬಹುದು. ಭೂತೇರು ಎಲ್ಲಮ್ಮ ದೇವಿಯ ಭಕ್ತರು. ದಿನನಿತ್ಯ ಇಲ್ಲವೇ ವಿಶೇಷ ವಾರಗಳಾದ ಶುಕ್ರವಾರ ಮಂಗಳವಾರ ಊರೂರು ಕೇರಿ ಕೇರಿ ತಿರುಗಿ ಹಾಡಿ ಕುಣಿದು ಭಿಕ್ಷೆ ಬೇಡಿ ಉಪಜೀವನ ನಡೆಸುತ್ತಾರೆ. ಇವರ ಮೇಳ ಕನಿಷ್ಠ 5 ಜನ ಕಲಾವಿದರಿಂದ ಕೂಡಿರುತ್ತದೆ. ಗಂಡಸರೇ ಅಥವಾ ಹೆಂಗಸರೇ ಇರಬೇಕೆಂಬ ಯಾವ ನಿರ್ಭಂದನೆಯು ಇಲ್ಲ. ಐದು ಜನ ಭೂತೇರಲ್ಲಿ ಒಬ್ಬರು ಕ್ವರಡಿಗೆ ಬಟ್ಟೆ ಧರಿಸುತ್ತಾರೆ. ಉಳಿದವರ ಕೊರಳಲ್ಲಿ ಎಲ್ಲಮ್ಮ ತಾಯಿಯ ಪದಕ ಹಾಗೂ ಕವಡೆ ಹಾರ ಇರುತ್ತದೆ. ಕರಡಿಗೆ ಬಟ್ಟ ಧರಿಸಿದವರು ಕೈಯಲ್ಲಿ ದೀವಟಿಗೆ ಹಿಡಿದಿರುತ್ತಾರೆ. ಉಳಿದವರು ತುಂತುಣಿ, ಡೋಲಕ, ತಾಳ ಡಪ್ಪು ನುಡಿಸುತ್ತಿರುತ್ತಾರೆ. ಇವರ ಉಡುಪು ಸಾಮಾನ್ಯವಾಗಿರುತ್ತದೆ. ಹಣೆಗೆ ಅರಶಿನ ಕುಂಕುಮ ಬಳಿದಿತ್ತಾರೆ. ಹೆಚ್ಚಾಗಿ ಇವರ ಹಾಡುಗಳು ಎಲ್ಲಮ್ಮ ದೇವತೆ ಕುರಿತಾಗಿರುತ್ತವೆ.

ಅಂಗಯ್ಯ ಹರಡಿಗೆ
ಮಂಗಯ್ಯ ದೀವಟಿಗೆ
ರಾಮು ರಾಮು . . . . . .
ಬಂಜೆಂಬ ಶಬ್ದ
ಬಿಡಬೇಡಂತಾರ
ರಾಮು – ರಾಮು . . . . .
ಎಲ್ಲಿ ಕಾಣಿ ಎಲ್ಲಿ ಕಾಣಿ
ಎಲ್ಲಮ್ಮನಂಥಕ್ಕಿ

ಇಂಥ ಹಾಡುಗಳು ಕೇಳುಗರ ಮನಸೂರೆಗೊಳಿಸುತ್ತವೆ. ಕಾಲಲ್ಲಿ ಗ್ವಜ್ಜೆ, ಕೈಯಲ್ಲಿ ದೀವಟಿಗೆ ತಲೆಯ ಮೇಲೆ ತುಂಬಿದ ಕೊಡ ಇಟ್ಟುಕೊಂಡು ಗತ್ತಿಗೆ ತಕ್ಕಂತೆ ಕುಣಿಯುವಾಗ ಕಣ್ಣುಗಳಿಗೆ ಮಹದಾನಂದವಾಗುತ್ತದೆ. 5ಜನ ಭೂತೇರ ಮೇಳದಲ್ಲಿ ಒಂದು ಹಿಮ್ಮೇಳ, ಇನ್ನೊಂದು ಮುಮ್ಮೇಳ ಮಾಡಿಕೊಂಡಿರುತ್ತಾರೆ. ಮುಮ್ಮೇಳದವರೇ ಮೇಲಿನಂತೆ ಹಾಡು ಹೇಳುವರು. ಹಿಮ್ಮೇಳದವರಿಂದ ಹಾಡು ಪುನರಾವರ್ತನೆಯಾಗುವುದು.

ಈ ಭೂತೇರು ಸಂಪೂರ್ಣವಾಗಿ ಎಲ್ಲಮ್ಮ ದೇವಿಯ ಸಂಪ್ರದಾಯಕ್ಕೆ ತಮ್ಮನ್ನು ತಾವೆ ಅರ್ಪಿಸಿಕೊಂಡಿರುತ್ತಾರೆ. ದಾನದಿಂದ ಬಂದ ಹಣ, ದವಸಧಾನ್ಯಗಳು ತಮಗೆ ಎಷ್ಟು ಬೇಕೋ ಅಷ್ಟು ತಮ್ಮ ಉಪಜೀವನಕ್ಕಾಗಿ ಬಳಸಿಕೊಂಡು ಉಳಿದ್ದೆಲ್ಲಾ ದೇವಿಯ ಹೆಸರಿಗೆ ಮುಡುಪಾಗಿಡುತ್ತಾರೆ. ಭೂತೇರಾದವರಿಗೆ ಮದುವೆಯಾಗಲು ಯಾವ ನಿರ್ಭಂದನೆಗಳು ಇಲ್ಲ.

ಇವರು ಬೀದರ ನಗರದ ಚೌಬಾರಾ ಕಾಲೋನಿ, ಮೈಲೂರ ಮುಂತಾದ ನಗರ ಊರುಗಳಲ್ಲಿ ವಾಸವಾಗಿದ್ದರೆ. ಬೀದರ ನಗರದಲ್ಲಿ ನೆಲೆಸಿರುವ ಶರಣಪ್ಪ ಭೂತೇರ ಇವರಿಗೆ ಕರ್ನಾಟಕ ಜಾನಪದ ಅಕಾಡೆಮಿ ಹಾಗೂ ರಾಜೋತ್ಸವದ ಪ್ರಶಸ್ತಿಗಳು ದೊರೆತಿವೆ. ಬೆನಕನಳ್ಳಿ ಎಲ್ಲಮ್ಮ ವಾರದ ಜಾತ್ರೆ ಬೀದರಿನ ವಳಕೋಟಿ ಭವಾನಿ ದಸರಾ ಮೆರವಣಿಗೆಯಲ್ಲಿ ಭೂತೇರ ಕಲೆ ಅದ್ಭುತವಾಗಿ ಪ್ರದರ್ಶನ ಗೊಳ್ಳುತ್ತದೆ.

4 : 3) ಜಾತಗಾರರು :

ನಾಟಕ ಮೊದಲಾದವುಗಳಲ್ಲಿ ಅಭಿನಯಿಸುವ ವೃತ್ತಿ ಕಲಾವಿದರಿಗೆ 'ಜಾತಗಾರ' ರೆಂದು ಕರೆಯುತ್ತಾರೆ. ಡೋಲಕ, ತಬಲಾ, ಪೇಟಿ ಮುಂತಾದ ವಾದ್ಯಗಳಿಂದ ಕೂಡಿದ ಒಂದೇ ಕುಟುಂಬಕ್ಕೆ ಸೇರಿದ 3 – 4 ಜನ ಸೇರಿ ತಮಗೆ ಇಷ್ಟವಾದ ಪಾತ್ರಗಳನ್ನು ಹಾಕಿರುತ್ತಾರೆ. ಹೆಣ್ಣು ಪಾತ್ರಗಳನ್ನು ಗಂಡೇ ಅಭಿನಯಿಸುವುದು ಕಂಡುಬರುತ್ತದೆ. ಇವರ ಕಲೆ ಗಂಭೀರವಾದುದಲ್ಲ. ಹಾಡು ಸಂಭಾಷಣೆಗಳಿಂದ ಕೂಡಿರುತ್ತದೆ. 'ಕುಣಿತವೇ' ಅಧಿಕವಾಗಿರುತ್ತದೆ. ಭಾಲ್ಕಿ ತಾಲೂಕಿನ ಖಾನಪೂರ (ಮೈಲಾರ ಮಲ್ಲಣ್ಣನ) ಉತ್ಸವದಲ್ಲಿ ಜಾತಗಾರರು ಕಂಡು ಬರುತ್ತಾರೆ.

4 : 4) ಬಾಳಸಂತೂರ :

ಬಾಳಸಂತೂರ ಹೆಸರು ಹೇಗೆ ಬಂತೆಂಬ ಪ್ರಶ್ನೆಗೆ ನಿಖರವಾದ ದಾಖಲೆಗಳಿಲ್ಲ. ಬಾಳಸಂತೂರ ಕಲೆ ಪರಂಪರಗತವಾಗಿ ಬೆಳೆದುಕೊಂಡು ಬಂದಿದ್ದಕ್ಕೆ ದಂತ ಕಥೆಗಳಿವೆ. ಇವರು ಕಬ್ಬಲಿಗ ಜಾತಿಗೆ ಸೇರಿದವರಾಗಿದ್ದಾರೆ. ದಿನಬೆಳಗಾದರೆ, ಹಣೆಗೆ ಕುಂಕುಮ ಹಚ್ಚಿಕೊಂಡು, ಬಗಲಿಗೆ ಜೋಳಿಗ ಹಾಕಿಕೊಂಡು ಮನೆಯಿಂದ ಮನೆಗೆ ಭಿಕ್ಷೆ ಬೇಡುತ್ತಾರೆ. ಭಿಕ್ಷೆ ಬೇಡುವಾಗ ಬಲಗೈ ಹೆಬ್ಬರಳಿಗೆ ಗಗ್ಗರ ಹಾಕಿಕೊಂಡು ಗತ್ತು ಕೂಡಿಸಿಕೊಂಡು ಹಾಡು ಹೇಳುವರು. ಇವರು ಹಾಡುವ ಹಾಡುಗಳು ಪೌರಾಣಿಕ ಮತ್ತು ಸಾಮಾಜಿಕ ಅಂಶಗಳನ್ನು ಒಳಗೊಂಡಿರುತ್ತವೆ.

ಉದಾಹರಣೆಗೆ ಒಂದು ಹಾಡು :

ಬಂಜೆಪಲ್ಲೆ ಊರಾಗ
ಗಂಡನ ಹೆಸರು ಲಿಂಗನಗೌಡ
ಮಗ ಹನುಮಂತ ಹಾನ
ಮಗಳು ನರಸಮ್ಮ
ತಾಯಿ ಎಲ್ಲಮ್ಮ
ತಾಯಿ ಎಲ್ಲಮ್ಮ
ಸಿಂದಿ ಮಾರತಾಳ
ಬಂಜೆಪಲ್ಲೆ ಊರಾಗ

ಈಗ ವಡ್ಡರುಬಂದಾರ
ಕೆರಿ ಅಲ್ಲಿ ಕಟ್ಟತಾರೆ
ಬಂಜೆಪಲ್ಲೆ ಊರಾಗ

ಹೀಗೆ ಹಾಡು ಮುಂದುವರಿಯುತ್ತವೆ. ಅಷ್ಟರಲ್ಲಿ ಆಯಾ ಮನೆಯ ಒಡತಿ ಹಿರಿಯರು ರೊಟ್ಟಿ, ಅನ್ನ, ಪಲ್ಲೆ, ಇಲ್ಲವೆ ಜೋಳ, ಗೋಧಿ ಹಿಟ್ಟು, ಬಟ್ಟೆ ದಾನವಾಗಿ ಕೊಡುವರು. ನಂತರ ಬಾಳಸಂತ ಕಲಾವಿದರು ಮುಂದಿನ ಮನೆಗೆ ಹೋಗಿ ಹಿಂದಿನಂತೆ ಹಾಡು ಹೇಳುವರು. ಹೀಗೆ ಸಮಯವಾಗುವರೆಗೆ ದಾನ ಬೇಡಿಕೊಂಡು ಮನೆಗೆ ಹೋಗಿ ಹೊಟ್ಟೆ ತುಂಬಿಕೊಳ್ಳುವರು. ಇದು ಬಾಳಸಂತ ವೃತ್ತಿಗಾಯಕರ ಜೀವನ, ಬಾಳಸಂತರಿಗೆ ಭಿಕ್ಷೆ ನೀಡುವುದರಿಂದ ಮಕ್ಕಳಾಗದವರಿಗೆ ಮಕ್ಕಳಾಗುತ್ತವೆಂಬ ಜನಪದ ನಂಬುಗೆ ಹಳ್ಳಿಯವರಲ್ಲಿದೆ. ಚಿಕ್ಕ ಮಕ್ಕಳು ರೋಗ – ರುಜಿನಗಳಿಂದ ಬಳಲುತ್ತಿದ್ದರೆ ಆ ಮಕ್ಕಳ ಮೇಲಿನ ಬಟ್ಟೆ ಈ ಸಂತರಿಗೆ ಕೊಟ್ಟರೆ, ಮಕ್ಕಳು ಜ್ವರ ಕಡಿಮೆಯಾಗುತ್ತದೆಂಬ ಭಾವನೆಯು ಉಂಟು. ಬಾಳಸಂತರು ಬೀದರ ಜಿಲ್ಲೆಯ ಪಾಪನಾಶಿನಿ, ಎಲ್ಲಮ್ಮ, ಬಸವಣ್ಣ ಮುಂತಾದ ಉತ್ಸವಗಳಲ್ಲಿ ಕಂಡುಬರುತ್ತಾರೆ.

### 4 : 5) ಕೋಲಾಟ :

ಕೋಲುಗಳನ್ನು ಹೊಡೆಯ್ಯುತ್ತ ಸೇರಿ ಆಡುವ ಆಟವೇ ಕೋಲಾಟ. ಇದು ದೈವೀ ಆರಾಧನೆಯ ಜನಪದ ಕಲೆ, ಹಾಡು ಮತ್ತು ಸಂಗೀತಗಳನ್ನೊಳಗೊಂಡ ಆಕರ್ಷಕ ನೃತ್ಯ ಕೂಟ, ಬೀದರ ನಗರದಲ್ಲಿ ಜರುಗುವ ವಿಠ್ಠಲನ ಉತ್ಸವದ ಮೆರವಣಿಗೆಯಲ್ಲಿ ಕೋಲಾಡುವ ಪರಿಪಾಠವಿದೆ. ಮೆರವಣಿಗೆಯಲ್ಲಿ ಪಾಲ್ಗೊಂಡ ಭಕ್ತಾದಿಗಳಿಗೆ ಮನರಂಜನೆ ಕೊಡುವದರ ಜೊತೆಗೆ ದೇವರ ಹೆಸರಿನಲ್ಲಿ ಕೋಲಾಟವಾಡಿ ಕೃತಾರ್ಥರಾದೇವು ಎಂಬ ನಂಬಿಕೆಯಿಂದ ಕೋಲು ಹಾಕು ವಿಶಿಷ್ಟ ಸಂಪ್ರದಾಯ ಈ ಉತ್ಸವದಲ್ಲಿದೆ. ಕೋಲಿಗೆ ತಕ್ಕ ಹೆಜ್ಜೆ ಹಾಕು, ಕಾಲಿಗೆ ತಕ್ಕಂತೆ ಗೆಜ್ಜೆ ಕಟ್ಟು, ಎಂಬ ಮಾತು ಕೋಲಾಟ ಕುರಿತ ಗಾದೆಯಾಗಿದೆ. ಕೋಲಾಟದಲ್ಲಿ 8 ಇಲ್ಲವೇ 24 ಜನರಿರುತ್ತಾರೆ. ಗಂಡಸರಾದವರು ಹೆಣ್ಣಿನ ವೇಷ ಹಾಕಿ ಮುಖಕ್ಕೆ ಬಣ್ಣ ಬಳೆದುಕೊಂಡು ತಲೆಗೆ ಕಿರೀಟ ಹಾಕಿಕೊಂಡು ಕೋಲಾಟ ಪ್ರಾರಂಭಿಸುತ್ತಾರೆ. ವಿಠಲನ ಮೆರವಣಿಗೆ ಮುಂದೆ–ಮೆಂದೆ ಸಾಗಿದಂತೆ ಕೋಲಾಟ ಆಡುವವರು ಮುಂದೆ – ಮುಂದೆ ಸಾಗುತ್ತ ಕೋಲಾಟವಾಡಿ ಭಕ್ತರ ಮನರಂಜಿಸುವರು ರಾಧಾ ರಾಧವೋ ರಮಣನ ನಿಲವೋ ಎನ್ನುವ ಹಾಡು ಹಾಡುವಾಗ ಕೋಲು ಆಡುವವರ ಕೈ–ಕಾಲು ನೋಡುವಂತಿರುತ್ತದೆ. ಹಾಡಿಗೆ ತಕ್ಕ ಸಮಗೀತ ಮತ್ತು ಕುಣಿತವಿರತ್ತದೆ. ಉಸ್ತೆಯ ಇಕ್ಕಲ ಭಾಗದಲ್ಲಿ ಜನ ಮರುಳಿದ ಜಾತ್ರೆ ಮರುಳೋ ಎಂಬಂತೆ ಜನ ನಿಂತಿರುತ್ತಾರೆ. ಲಯ ವೈವಿಧ್ಯದಿಂದ ನಾದ, ಕುಣಿತದ ಗತ್ತು ಈ ಉತ್ಸವದ ಕೋಲಾಟದಲ್ಲಿ ಕಂಡುಬರುತ್ತಾರೆ.

4 : 6) ಭಜನಾ ಮೇಳ :

ತಬಲಾ, ಹಾರ್ಮೋನಿಯಂ, ದಮಡಿ, ತಾಳ ಮೊದಲಾದ ವಾದ್ಯಗಳು ಭಜನಾ ಮೇಳದಲ್ಲಿರುತ್ತವೆ. ಮಠ ಮಂದಿರ ದೇವರ ಗುಡಿಗಳಲ್ಲಿ ಪ್ರತಿ ಸೋಮವಾರ, ಶನಿವಾರ ವಿಶೇಷವಾಗಿ ಶ್ರಾವಣ ಮತ್ತು ಹಬ್ಬ ಹರಿದಿನಗಳಚಿದು ಭಜನೆಯನ್ನು ಮಾಡುತ್ತಾರೆ.

ಭಜನಾ ಮೇಳದಲ್ಲಿರುವ ಕಲಾವಿದರು ಸಾಮಾನ್ಯ ಉಡುಪುಗಳನ್ನು ಧರಿಸುತ್ತಾರೆ. ಹಣೆಗೆ ಭಸ್ಮವನ್ನು (ವಿಭೂತಿ) ಬಳೆದುಕೊಳ್ಳುವರು. ಶರಣರ ವಚನಗಳು, ತತ್ವ ಪದಗಳು ಜಾನಪದ ಹಾಡುಗಳನ್ನು ಹಾಡುವರು. ಈ ಮೇಳದಲ್ಲಿ ನಾಯಕನೊಬ್ಬನ ತಾಳ ಹಾಕಿ ರಾಗ ಎತ್ತುತ್ತಿದ್ದಂತೆ ಹಿಮ್ಮೇಳದ ದಮಡಿ ವಾದಕನು ರಾಗಕ್ಕೆ ತಾಳ ನೀಡುತ್ತಾನೆ. ದಮಡಿ ವಾದಕ ಹಾರ್ಮೋನಿಯಂ ವಾದಕ ಹಾಗೂ ಒಟ್ಟು ತಾಳುಗಳ ವಾದಕರು ಹೀಗೆ ನಾಲ್ಕಾರು ಜನರು ಈ ಮೇಳದಲ್ಲಿರುತ್ತಾರೆ. ಹಿಮ್ಮೇಳದ ಯಾವನೊಬ್ಬನು ನಾಯಕನಿಗೆ ಸ್ಪೂರ್ತಿಯೆಂಬಂತೆ ಒಬ್ಬರಿಂದೊಬ್ಬರು ರಾಗಾಲಾಪನೆ ಮಾಡುವರು.

ಭಜನಾ ಹಾಡುಗಳನ್ನು ಪ್ರಾರಂಭ ಮಾಡುವಾಗ ಹಾಗೂ ಮುಕ್ತಾಯ ಮಾಡುವಾಗ ಜಯ ಜಯ ನಮಃ ಪಾರ್ವತಿ ಪತೇ ಎಂದು ಮುಖಂಡನಾದವನು ಹೇಳಿದರೆ ಉಳಿದವರು ಹಾಗೆ ನುಡಿವರು. ಕಲಬುರ್ಗಿ ಶರಣಬಸವೇಶ್ವರ, ಹುಮನಾಬಾದ ವೀರಭದ್ರೇಶ್ವರ ಬೀದರಿನ ಪಾಪನಾಶಿನಿ ದೇವರೋತ್ಸವದಲ್ಲಿ ವಿಶೇಷವಾಗಿ ಭಜನಾ ಮೇಳಗಳು ಭಾಗವಹಿಸಿ ತಮ್ಮ ಕಲೆಯ ಹಿರಿಮೆ–ಗರಿಮೆಯನ್ನು ತೋರಿಸುತ್ತಾರೆ.

4 : 7) ಬುಡಬುಡಿಕೆ :

ಬುಡ–ಬುಡ ಶಬ್ದ ಮಾಡುವ ಚರ್ಮ ವಾದ್ಯದಿಂದ ಬುಡಬುಡಿಕೆ ಎಂಬ ಹೆಸರು ಬಂದೆ. ಬಲಗೈಯಿಂದ ಡಮುರಗ ಬುಡ ಬುಡ ಶಬ್ದ ಮಾಡುತ್ತ ಎಡಗೈ ಮೇಲೆ ದಾನ ಕೊಟ್ಟವರ ಹಳೆಯ ಬಟ್ಟಗಳನ್ನು ಹೊದ್ದಕೊಂಡು ಮನೆ ಮೆನಗೆ ಭಿಕ್ಷೆಗೆ ಬರುವ ಬುಡ ಬುಡಿಕೆಯರು ತಲೆಗೊಂದು ರುಮಾಲು ಸುತ್ತಿರುತ್ತಾರೆ. ಇವರು ಅಮಗಿ ಕೋಟು ಪಚೆಜೆಯನ್ನು ಧರಿಸುತ್ತಾರೆ.

ಬುಡಬುಡಿಕೆ ಕಲಾವಿದರು ಪ್ರತಿ ದಿನ ಮುಂಜಾನೆ ಸ್ನಾನಮಾಡದೆ ಮುಖ ತೊಳೆದು ಅಗರಬತ್ತಿ ಹಚ್ಚಿ ದೇವರನ್ನು ಪ್ರಾರ್ಥಿಸಿ ಹಳ್ಳಿಗೆ ಪಚುಣ ಮಾಡುತ್ತಾರೆ. ಭಿಕ್ಷೆ ಬೇಡುವ ಮನೆಯ ಬಾಗಿಲಿಗೆ ಹೋಗಿ ಒಳೆದಾತಗಪ್ಪ ಒಳ್ಳೆದಾಗತಪ್ಪ ಎಂದು ಶುಭವನ್ನು ಹೇಳುತ್ತ ಶಕುನ ನುಡಿಯುತ್ತಾರೆ. ಅವರು ನುಡಿದದ್ದೆಲ್ಲಾ ಸತ್ಯವೇ ಎನ್ನುವ ನಂಬಿಕೆ ಜನಪದರವಾಗಿದೆ. ಇಷ್ಟೇ ಅಲ್ಲ ಬುಡಬುಡಿಕೆ ಹೇಳುವುದೆಲ್ಲಾ ನಿಜವಾತರುತ್ತದೆಂದು ನಂಬಿ ಭಿಕ್ಷೆ ನೀಡುವ ಮನೆಯವರು ಬಟ್ಟೆ, ಅನ್ನ, ರೊಟ್ಟಿ, ಜೋಳ, ಓದಿ ಇತರೆ ಕಾಳಗಳನ್ನು ನೀಡಿ ಕಳುಸುವ ಸಮಪ್ರದಾಯ ಇದೆ. ಒಟ್ಟನಲ್ಲಿ ಬುಡಬುಡಿಕೆಯವರು ಚತುರ ಮಾತುಗಾರ, ಗೇಗಾದರೂ ಮಾಡಿ ಜೋಳಿಗೆ ತುಂಬಿಕೊಂಡು ಮುಂದಿನ ಮೆನಗೆ ಹೋಗಬೇಕೆಂಬ ಪ್ರಯತ್ನದಲ್ಲಿರುತ್ತಾರೆ. ಶುಭಾಶುಭಗಳನ್ನು ಬಹಳ ಜಾಣ್ಮೆಯಿಮದ ಹೇಳುತ್ತಾನೆ. ಆ ಶುಭ ಎಂದು ಹೇಳಿ ಅದಕ್ಕೆ

ತಾನೇ ಪರಿಹಾರ ಸೂಚಿಸಿ ಮುಂದಿನ ಮನೆಗೆ ಹೋಗುವ ಪರಿಪಾಠ ಇದೆ. ಅಲ್ಲದೆ ಹಬ್ಬ ಹರಿದಿನಗಳ ದೇವರೋತ್ಸವಗಳ ಲಾಭವೂ ಸಹ ಪಡೆದುಕೊಳ್ಳುವರು. ಭಕ್ತರು ಕೊಟ್ಟ ಕಾಣಿಕೆ ಸ್ವೀಕರಿಸುವರು. ಶುಭ–ಅಶುಭ ನುಡಿದರು. ಈ ಬುಡಬುಡಿಕೆ ಸಂಪ್ರದಾಯದವರು ಹುಮನಾಬಾದ ವೀರಭದ್ರೇಶ್ವರ ಉತ್ಸವದಲ್ಲಿ ಕಂಡುಬರುತ್ತಾರೆ.

4 : 8) ಡೊಂಬರು :

ಗಳೆಯ ಮೇಲೆ ಲಾಗ ಕಸರತ್ತುಗಳನ್ನು ತೋರಿಸುತ್ತಾ ಜೀವನವನ್ನು ನಡೆಸುವವರಿಗೆ ಡೊಂಬರೆಂಬ ಹೆಸರಿದೆ. ಇವರು ಅಲೆಮಾರಿ ಜನರು. ಊರಿಂದೂರಿಗೆ ತಿರುಗಿ ಕಸರತ್ತಿನ ಆಟವಾಡಿ ಜನರಿಂದ ಹಣ, ರೊಟ್ಟಿ ಬ್ಯಾಳೆ ಅನ್ನ ಪಡೆದುಕೊಂಡು ಜೀವನ ನಡೆಸುತ್ತಾರೆ. ಡೊಂಬರು ಯಾವುದೇ ಹಳ್ಳಿನಗರದ ಕೇಂದ್ರ ಸ್ಥಳ ಇಲ್ಲವೆ ನಡು ಬೀದಿಯಲ್ಲಿ ಆಟ ಆರಂಭಿಸುತ್ತಾರೆ. ಇವರ ಮೇಳ 5–6 ಜನ ಮತ್ತು ಚಿಕ್ಕ ಮಕ್ಕಳೊಂದಿಗೆ ಇರುತ್ತದೆ. ಡೊಂಬರ ಹೆಂಗಸು ಅಥವಾ ಗಂಡಸಾಗಲಿ ಡೋಲು ಬಾರಿಸುತ್ತ ಜನರ ಮನಸ್ಸು ಸೆಳೆಯುತ್ತಾರೆ. ಶಕ್ತಿಯುತ ವ್ಯಾಯಾಮ ಕಸರತ್ತೆ ಇವರ ಆಟದ ವೈಶಿಷ್ಟ್ಯ. ಹಗ್ಗದ ಮೇಲೆ ನಡೆಯುವುದವ್ಯ, ಲಾಗ ಹಾಕುವುದು, ಪಲ್ಟಿ ಹೊಡಿಯುವುದು, ಚಿಕ್ಕ ಮಗುವಿನ ಹೊಕ್ಕಳು ಭಾಗದಲ್ಲಿ ಗಳೆ ಹಾಕಿ ಮೇಲಕ್ಕೆ ಎತ್ತುವುದು, ಕಬ್ಬಿಣದ ಚಿಕ್ಕ ಕಿಂಗಿನೊಳಗಿಂದ ಎರಡು ದೇಹಗಳು ಹೊರಬರುವುದು. ಚಕ್ರಬಾಣ ನಿರ್ಮಿಸುವುದು. ನಡು ನಡುವೆ ಸಿನೆಮಾ ಇಲ್ಲವೆ ಜನಪದ ಹಾಡುಗಳು ಹಾಡುವುದು ಮಾಡುತ್ತಾರೆ. ಇಂಥ ಕಸರತ್ತು ನೋಡಲು ಹಾಡುಗಳು ಕೇಳಲು ಕುತೂಹಲಕಾರಿಯಾಗಿರುತ್ತವೆ. ಆಟ ಮುಕ್ತಾಯಗೊಂಡ ಮೇಲೆ ತಟ್ಟೆ ಹಿಡಿದು ಜಾತ್ರೆಗೆ ಬಂದ ಭಕ್ತರಿಂದ ಕಾಣಿಕೆ ಹಣ ಸಂಗ್ರಹಿಸುವರು. ಬೀದರಿನ ವಿಠಲನ ಉತ್ಸವದಲ್ಲಿ ಈ ಪ್ರದರ್ಶನ ಕಲೆ ಎದ್ದು ಕಾಣುತ್ತದೆ.



4 : 9) ಪುರವಂತರ ಕುಣಿತ :

ಪುರವಂತರ ಕುಣಿತ ಆರಾಧನೆ ಕಲೆಗಳಲ್ಲಿ ಒಂದು. ಭೂತೇರು, ಗೋರವರು, ಚೌಡಿಕೆ ಮೇಳದವರು, ಡೊಳ್ಳು ಮೇಳದವರು ಈ ಮುಂತಾದ ಕಲೆಗಳು ದೇವತಾರಾಧನೆಯ ಹಿನ್ನಲೆಯಲ್ಲಿಯೇ ಹುಟ್ಟಿಕೊಂಡಂತೆ ಪುರವಂತಿಕೆಯೂ ಒಂದು. ವೀರಭದ್ರ ದೇವರ ಹಿನ್ನಲೆಯಲ್ಲಿ ಹುಟ್ಟಿದ ಈ ಕಲೆಯನ್ನು ದಕ್ಷಿಣ ಕರ್ನಾಟಕದಲ್ಲಿ 'ವೀರಗಾಸೆ' ಎಂದು ಕರೆಯುತ್ತಾರೆ. ಈ ನಾಡಿನಲ್ಲಿ ಪುರವಂತರೆಂದು ಕರೆಯುವುದುಂಟು. ಈ ಆರಾಧನೆ ಕಲೆಯನ್ನು ಮೈಗೂಡಿಸಿಕೊಂಡು ಬಂದವರು ಪುರವಂತರೆಂದು ಅಡ್ಡ ಹೆಸರು ಇಟ್ಟುಕೊಂಡಿರುತ್ತಾರೆ. ಬಡಿಗ–ಪಂಚಾಳ ವರ್ಗದ ಜನ ಈ ಪುರವಂತಿಕೆಯನ್ನು ಅನುವಂಶಿಕವಾಗಿ ಮೈಗೂಡಿಸಿಕೊಂಡು ಬಂದಿರುತ್ತಾರೆ. ತಿಂಥಿಣಿ ಮೌನೇಶ್ವರ, ಹುಮನಾಬಾದ ವೀರಭದ್ರೇಶ್ವರ ದೇವರೋತ್ಸವದಲ್ಲಿ ಪುರವಂತಿಕೆ ಕುಣಿತ ಅದ್ಭುತವಾಗಿರುತ್ತದೆ.

4 : 10) ಬುರ್ ಬುರ್ ಪೋಚಮ್ಮ :

ಡೋಲಕದ ಮೇಲೆ ಬುರ್-ಬುರ್ ಎನ್ನುವ ಶಬ್ದ ಹೊರ ಬರುವಂತೆ, ಬಾರಿಸುತ್ತ ಮನೆಯಿಂದ ಮನೆಗೆ ಭಿಕ್ಷೆ ಬೇಡುತ್ತ, ಉಪಜೀವನ ನಡೆಸುವ ಇವರಿಗೆ ಬುರ್-ಬುರ್ ಪೋಚಮ್ಮ ಎಂಬ ಹೆಸರು ಬಂದಿದೆ. ಪೋಚಮ್ಮ ಈ ಕಲಾವಿದರ ಧರ್ಮದೇವತೆಯಾಗಿದ್ದಾಳೆ. ಇವರು ಪ್ರತಿನಿತ್ಯ ಸೂರ್ಯೋದಯದ ಹೊತ್ತಿಗೆ ನಗರ ಇಲ್ಲವೆ ಹಳ್ಳಿಯ ಮನೆ ಮನೆಗೆ ಹೋಗಿ ಭಿಕ್ಷೆ ಬೇಡುವರು. ದಾನ ಕೊಟ್ಟ ಹರಕು ಬರಕು ಬಟ್ಟೆ ಧರಿಸಿ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೈಯಲಿ ಡೋಲಕ ಹಿಡಿದು ಬುರ್-ಬುರ್ ಶಬ್ದ ಮಾಡುತ್ತ ಕುಣಿಯುತ್ತ ಹಾಡು ಹೇಳುವದು.

ಎ ಎಮ್ಮೋ ದಾನ ತಾರಮ್ಮ
ಬಾರಮ್ಮೋ ಬಾ ತಾಯಿ
ಕಲ್ಲಮ್ಮ, ಮಲ್ಲಮ್ಮ
ಬೇಗ ಬಾರಮ್ಮಾ ಹಿಟ್ಟು
ತಾರಮ್ಮ

ಹಡದವ್ವ ಮಕ್ಕಳು – ಮರುಗಳ್ ತಣ್ಣಗಿರಲವ್ವ ಎನ್ನುವ ಚುಟುಕು ಹಾಡುಗಳು ಇವರದಾಗಿವೆ. ಆಶುಕವಿಯಂತೆ ಅಲ್ಲಿಂದಲ್ಲೇ ಹಾಡು ಕಟ್ಟಿ ಹೇಳುತ್ತಾರೆ. ಇಬ್ಬರಿಂದ ಐದು ಜನರ ಮೇಳ ಇವರದಾಗಿತ್ತದೆ. ಡೋಲಕ್ಕೆ ಬಾರಿಸುವ ಕಲಾವಿದನೆ ಹಾಡು ಹೇಳುವನು. ಇನ್ನುಳಿದ ಕಲಾವಿದರು ಆ ಹಾಡನ್ನೆ ಪುನರಾವರ್ತನೆ ಮಾಡಿ ಕುಣಿದು ಕುಪ್ಪಳಿಸುವರು. ಕಾಣಿಕೆ ಸ್ವೀಕರಿಸಿ ಮುಂದಿನ ಮನೆ ಇಲ್ಲವೆ ಅಂಗಡಿಗೆ ಸಾಗುವರು. ಶಿವರಾತ್ರಿಯಲ್ಲಿ ಜರುಗುವ ಬೀದರಿನ ಪಾಪನಾಶಿ ದೇವರೋತ್ಸವದಲ್ಲಿ ದೀಪಾವಳಿ ಹಬ್ಬದ ಸಂದರ್ಭದಲ್ಲಿ ಅಂಗಡಿಗಳ ಮುಂದೇ ತಾವೇ ಬಡಿದುಕೋಂಡು ರಕ್ತ ಬರುವವರೆಗೆ ಹೊಡೆದುಕೊಳ್ಳುತ್ತಾರೆ. ಇವರ ಮೈಮೇಲಿನ ರಕ್ತ ಕಂಡು ಹಾದಿ ಬೀದಿಯಲ್ಲಿ ಹೋಗುವ ಜನರು ಕಾಣಿಕೆ ಕೊಟ್ಟು ಮುನ್ನುಗ್ಗುತ್ತಾರೆ. ಆ ಹಣವೇ ಈ ಕಲಾವಿದರ ಉಸಿರಾಗುತ್ತದೆ. ಬೀದರಿನ ಪಾಪನಾಶಿನಿ ಉತ್ಸವದಲ್ಲಿ ಈ ಕಲೆ ಅದ್ಭುತವಾಗಿ ಜನರನ್ನು ರಂಜಿಸುತ್ತದೆ.

4 : 11) ಹಾವಾಡಿಗರು :

ಹಾವುಗಳನ್ನು ಆಡಿಸುವ ಅಲೆಮಾರಿ ಭಿಕ್ಷಕರಿಗೆ ಹಾವಾಡಿಗರೆಂದು ಕರೆಯುತ್ತಾರೆ. ಇವರು ಕಾಡಾರಣ್ಯ ಇಲ್ಲವೆ ಹುತ್ತಗಳಿಂದ ಹಾವುಗಳನ್ನು ಹಿಡಿದು ತಂದು ವಿಷಯ ಹಲ್ಲುಗಳನ್ನು ಕಿತ್ತು ತಮ್ಮ ಆಟದ ಸಾಧನವನ್ನಾಗಿ ಬಳಸಿಕೊಳ್ಳುತ್ತಾರೆ. ಹಾವಾಡಿಗರು, ಹಾವುಗಳನ್ನು ಆಡಿಸುವುದರ ಜೊತೆಗೆ ಯಕ್ಷಿಣಿ ವಿದ್ಯೆಯನ್ನು ಹೊಂದಿರುತ್ತಾರೆ. ಈ ವಿದ್ಯೆ ವಂಶ ಪರಂಪರೆಯಾಗಿ ಬಂದಿರುತ್ತದೆ. ಹಾವಾಡಿಗರ ಮೇಳದಲ್ಲಿ ಅವರ ಕುಟುಂಬದ 4–5 ಜನ ಸೇರಿರುತ್ತಾರೆ. ಒಬ್ಬನು ಡೋಲು ಬಾರಿಸಿದರೆ ಇನ್ನೊಬ್ಬ ಪುಂಗಿ ಊದುತ್ತಿರುತ್ತಾರೆ.

ಉಳಿದವರು ಯಕ್ಷಿಣಿ ವಿದ್ಯೆಯಲ್ಲಿ ತೊಡಗಿರುತ್ತಾರೆ. ಮಣ್ಣಿಗೆ ಸಕ್ಕರೆ ಮಾಡುವುದು, ಹಗ್ಗಕ್ಕೆ ಹಾವಾಗಿಸುವುದು. ಮುಂಗಲಿ ಹಾವಿಗೆ ಜಗಳ ಹಚ್ಚುವುದು ಮಾಡುತ್ತಿರುತ್ತಾರೆ.

ಹಾವಾಡಿಗರು ನಡು-ನಡುವೆ ಹಾಸ್ಯ ಕುರಿತಾದ ಮಾತುಗಳು ಆಡುವುದು, ಹಾಡುವುದು, ಮಾಡಿ ಜನರಿಗೆ ಖುಷಿಕೊಟ್ಟು ಉತ್ಸವದ ಭಕ್ತರಿಂದ ದಾನ ಪಡೆದುಕೊಳ್ಳುತ್ತಾರೆ. ಉತ್ಸವದಲ್ಲಿ ಭಾಗವಹಿಸಿದ ಮಕ್ಕಳಂತು ಹಾವಾಡಿಗಾರರ ಸುತ್ತುವರಿದು ಹಾವುಗಳನ್ನು ನೋಡಿ ವಿಸ್ಮಯಗೊಳ್ಳುತ್ತಾರೆ. ಬೀದರಿನ ಪಾಪನಾಶಿನಿ ಉತ್ಸವದಲ್ಲಿ ಹೆಚ್ಚಾಗಿ ಈ ಕಲೆ ಪ್ರದರ್ಶನಗೊಳ್ಳುತ್ತದೆ.

4 : 12) ನಂದಿಕೋಲ ಕುಣಿತ :

ಹನ್ನೆರಡನೆಯ ಶತಮಾನ ಕಲ್ಯಾಣ ಕ್ರಾಂತಿ ಭೂಮಿಯಾದ ಬಸವಕಲ್ಯಾಣ. ಅಲ್ಲಿ ಪ್ರತಿವರ್ಷ ನಡೆಯುವ ಬಸವಣ್ಣನ ಉತ್ಸವದಲ್ಲಿ ನಂದಿಕೋಲು ಕುಣಿತ ವಿಶೇಷವಾಗಿರುತ್ತದೆ. ಉತ್ಸಾಹಿ ಯುವಕರು ನಂದಿಕೋಲನ್ನು ಹಿಡಿದುಕೊಂಡು ಧಡ್, ಧಕ್ಕೆ, ಧಡ್ಕೆ, ಧಡ್ಕೆ ಎಂಬ ತಮ್ಮಟೆಯ ನಾದಕ್ಕೆ ಲಯಬದ್ಧರಾಗಿ ಹೆಜ್ಜೆ ಹಾಕುತ್ತ ಆಗೊಮ್ಮೆ ಈಗೊಮ್ಮೆ ಕಂಬವನ್ನು ಮೇಲಕೆತ್ತಿ ಕುಲುಕಿ ಝುಲಕ ಝುಲಕ ಸದ್ದು ಕೇಳಿಸುವಂತೆ ಮಾಡುತ್ತಾರೆ. ಆ ಸಮಯದಲ್ಲಿ ಸಂಬಳ ನುಡಿಸುವ ಕಲಾವಿದರು ಆಕಾಶಕ್ಕೆ ಧ್ವನಿ ಮುಟ್ಟುವಂತೆ ಸಂಬಳ ಬಡಿಯುತ್ತಾರೆ. ಶೈವ ಸಂಪ್ರದಾಯದಲ್ಲಿ ನಂದಿಕೋಲು ಹೆಚ್ಚು ಜನಪ್ರಿಯವಾದ ಕಲೆ ಇದಾಗಿದೆ. ಈ ಕಲೆಯ ಹುಟ್ಟಿನ ಬಗ್ಗೆ ಪೌರಾಣಿಕ ಹಿನ್ನಲೆಯಿದೆ. ನಂದಿಕೋಲು ಉತ್ಸವಗಳಲ್ಲಿ ಮಾತ್ರ ಹೊರಬಂದು ಮುಂದಿನ ಉತ್ಸವದವರೆಗೆ ಅದೇ ಮಠದ ಒಳಗೆ ಧೂಳು ಹೊದ್ದುಕೊಂಡು ಮೂಲೆಯಲ್ಲಿ ಕೂತಿರುತ್ತದೆ.

4 : 13) ಕರಡಿ ಕುಣಿತ :

ಕರಡಿ ಕುಣಿತ ಎಂದಾಕ್ಷಣ ಬೇಂದ್ರೆಯವರ 'ಕರಡಿ ಕುಣಿತ' ಕವನದ ನೆನಪು ಬರುತ್ತದೆ. ಕರಡಿ ಕುಣಿಸುವ ವ್ಯಕ್ತಿ ಕೈಗೆ ಕಡಗ ಹಾಕಿಕೊಂಡು ಹೆಗಲ ಮೇಲೆ ಕರಿ ಕಂಬಳಿಯನ್ನು ಹೊದ್ದು, ಗಂಡು ಹೆಜ್ಜೆ ಹಾಕಿ, ಕೊರಳಿಗೆ ಕರಿಯ ದಾರ ಕಟ್ಟಿಕೊಂಡು ಕರಡಿ ಹಾಗೆ ಕಾಣಿಸಿಕೊಂಡಿರುತ್ತಾನೆ.

ಕಾಡಿನಲ್ಲಿರುವ ಮರಿ ಕರಡಿಯನ್ನು ಹಿಡಿದು ಮೂಗುದಾರ ಹಾಕಿ ಮನೆಯಲ್ಲಿಯೇ ಕುಣಿತದ ತರಬೇತಿ ಕೊಟ್ಟು ಜನರ ಮುಂದೆ ಕುಣಿಸಿ ಅವರಿಂದ ಹಣ ಪಡೆದು ಜೀವನ ನಡೆಸುತ್ತಾರೆ. ಕರಡಿ ಕೈಯಲ್ಲಿ ಬಡಿಗೆ ಹಿಡಿದುಕೊಂಡು ಮುದುಕನಡಿಗೆ ತೋರಿಸುತ್ತದೆ. ಯುವ ಹುಡುಗರ ಹಾಗೆ ಕಣ್ಣು ಹೊಡೆಯುತ್ತದೆ. ಹಿಂದಿನ ಕಾಲುಗಳ ಮೇಲೆ ನಿಂತು ಮುಂಗಾಲುಗಳನ್ನು ಮೇಲೆ ಮಾಡಿ ಕುಣಿಯುತ್ತದೆ. ಸುತ್ತ-ಮುತ್ತ ನೆರದ ಜನರಿಗೆ ಎರಡು

ಕೈಯಿಗಳಿಂದ ನಮಸ್ಕಾರ ಮಾಡುತ್ತದೆ. ಕರಡಿ ಬಲಶಾಲಿ ಪ್ರಾಣಿಯಾದುದರಿಂದ ಅದರ ಮೇಲೆ ಮಕ್ಕಳಿಗೆ ಕೂಡಿಸಿದರೆ, ಅದರ ಕೂದಲನ್ನು ಮಗುವಿನ ಕೊರಳಿಗೆ ಇಲ್ಲವೆ ಉಡುದಾರಕ್ಕೆ ಕಟ್ಟಿದರೆ, ಹೆದರಿಕೆ ಮಾಯವಾಗಿ ಅರಣ್ಯ ಸೇರುತ್ತದೆಂಬ ನಂಬಿಕೆಯಿದೆ. ವೀರಭದ್ರೇಶ್ವರ ಉತ್ಸವದಲ್ಲಿ ಈ ಕುಣಿತವಿರುತ್ತದೆ.

೪ : ೧೩) ಬಹುರೂಪಿ :

ಬೀದರ ಜಿಲ್ಲೆಯ ಹುಮನಾಬಾದ ತಾಲ್ಲೂಕಿನ ನಿರ್ಣಾವಾಡಿ ಗ್ರಾಮದಲ್ಲಿ ಈ ಕಲಾವಿದರು ವಾಸವಾಗಿದ್ದಾರೆ. ಉಪಜೀವನ ಮಾಡಲು ವಿವಿಧ ವೇಷಗಳನ್ನು ಹಾಕಿ ಕಲೆ ಪ್ರದರ್ಶನ ಮಾಡುವವರಿಗೆ ಬಹುರೂಪಿಗಳೆಂದು ಕರೆಯುತ್ತಾರೆ. ಇವರು ಕಬ್ಬಲಿಗ ಜಾತಿಗೆ ಸೇರಿದವರಾಗಿದ್ದಾರೆ. ಬಹುರೂಪಿಗಳು ಅಲೆಮಾರಿ ವರ್ಗಕ್ಕೆ ಸೇರಿದವರು. ಸಂಸಾರ ಸಮೇತವಾಗಿ ಊರಿಂದ ಊರಿಗೆ ತಿರುಗಿ ಕಲೆ ಪ್ರದರ್ಶನ ಮಾಡಿ ಕಾಣಿಕೆ ಹಣ ಪಡೆದುಕೊಳ್ಳುತ್ತಾರೆ.

ಸಾಮಾನ್ಯವಾಗಿ ಇವರ ಮೇಳದಲ್ಲಿ ಹನ್ನೆರಡರಿಂದ ಹದಿನಾರು ಜನರಿರುತ್ತಾರೆ. ವೇಷಪೋಷಾಕುಗಳು ಪಾತ್ರಕ್ಕನುಸಾರವಾಗಿ ಇರುತ್ತವೆ. ಉದಾ : ಶಿವನ ಪಾತ್ರ ಮಾಡಬೇಕಾದರೆ ಹುಲಿ ಚರ್ಮ, ವಿಭೂತಿ, ಪ್ಲಾಸ್ಟಿಕ ಹಾವು, ಕೈಯಲ್ಲಿ ತ್ರಿಶೂಲ, ಇತ್ಯಾದಿಗಳ ಸಹಾಯ ಪಡೆದುಕ್ಕೊಂಡು ಕ್ಯಾಲೆಂಡರ ಶಿವನಂತೆ ಕಾಣುತ್ತಾರೆ. ಪೇಟಿ, ತಬಲ, ಎಕ್ಕ, ತಾಳ, ದಮಡೆ ಮೊದಲಾದ ವಾದ್ಯಗಳನ್ನು ಬಳಸಿಕೊಳ್ಳುತ್ತಾರೆ. ಈ ಬಹುರೂಪಿಗಳು ಹೆಚ್ಚಾಗಿ ವೀರಸಿಂಧೂರ ಲಕ್ಷಣ, ಗದಾಯುದ್ಧ ಪ್ರಸಂಗ, ಹರಿಶ್ಚಂದ್ರ ಮುಂತಾದ ಪೌರಾಣಿಕ ಹಾಗೂ ಸಾಮಾಜಿಕ ಕಥೆಗಳಲ್ಲಿ ಬರುವ ಪಾತ್ರಗಳ ರೂಪತಾಳಿ ತಮ್ಮ ಕಲೆ ಪ್ರದರ್ಶಿಸುತ್ತಾರೆ. ಇತ್ತೀಚೆಗೆ ಈ ಕಲೆ ಹುಮನಾಬಾದ, ವೀರಭದ್ರೇಶ್ವರ ದೇವರೋತ್ಸವದ ಸಮಯದಲ್ಲಿ ಪ್ರದರ್ಶನಗೊಳ್ಳುತ್ತದೆ.

ಬೀದರ ಜಿಲ್ಲೆಯ ದೇವರೋತ್ಸವಗಳು – ಒಂದು ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ, ನಡೆಸಿದ ಅಭ್ಯಾಸ ಮತ್ತು ಸಮೀಕ್ಷೆ ಅಡಿಯಲ್ಲಿ ಈ ಕೆಳಕಂಡ ಅಂಶಗಳನ್ನು ಗುರುತಿಸಬಹುದು.

ಬೀದರ ಜಿಲ್ಲೆ 1948ರ ಹಿಂದೆ ಹೈದ್ರಾಬಾದಿನ ನಿಜಾಂ ಅರಸನ ಆಡಳಿತಕ್ಕೆ ಒಳಪಟ್ಟಿದ್ದರಿಂದ, ಉರ್ದು ಆತನ ಆಡಳಿತದ ಭಾಷೆಯಾಗಿರುವುದಲ್ಲದೆ, ಕಡ್ಡಾಯ ಶಿಕ್ಷಣವು ಆಗಿತ್ತು. ಹೀಗಾಗಿ ಎಲ್ಲರೂ ಉರ್ದು ಭಾಷೆಯಲ್ಲಿಯೇ ಅಭ್ಯಾಸ ಮಾಡಬೇಕಾಗುತ್ತಿತ್ತು. ಉರ್ದುವಿನೊಂದಿಗೆ ತೆಲಗು. ಮರಾಠಿ ಭಾಷೆಯ ಪ್ರಭಾವವು ಈ ಪ್ರದೇಶದಲಿತ್ತು. ಕನ್ನಡ ಭಾಷೆ ನೆಲಕಚ್ಚಿತ್ತು. ಬೀದರ ನಾಡಿನಲ್ಲಿ ಮನೆಯ ಭಾಷೆ ಮತ್ತು ವ್ಯವಹಾರಿಕ ಭಾಷೆಗಳು ಉರ್ದು, ಮರಾಠಿ ಮತ್ತು ತೆಲಗು ಆಗಿರುವುದರಿಂದ ಈ ನಾಡಿನಲ್ಲಿ ಸಮ್ಮಿಶ್ರ ಸಂಸ್ಕೃತಿ ಎದ್ದು ಕಾಣುತ್ತದೆ.

ಕಾಡಿನಲ್ಲಿದ್ದ ಮಾನವ ನಾಡಿಗೆ ಬಂದು ಅಲೆಮಾರಿ ಜೀವನ ಬಿಟ್ಟು ನಾಗರಿಕ ಬದುಕನ್ನು ತನ್ನದಾಗಿಸಿಕೊಂಡಿದ್ದಾನೆ. ಒಂದೆಡೆ ನೆಲೆನಿಂತು ಬದುಕುತ್ತಿದ್ದಾನೆ. ಪರಿಸರವೇ ಅವನಿಗೆ ದೇವರು. ಪ್ರಕೃತಿಯ ಮರ–ಗಿಡ, ಬೆಟ್ಟ ಗುಡ್ಡ, ಸೂರ್ಯ–ಚಂದ್ರ ಮೊದಲಾದವು ದೇವರು. ಇವುಗಳಲ್ಲಿ ಒಂದು ಅದ್ಭುತ ಶಕ್ತಿ ಇದೆ. ಎಂದು ಮನಗಂಡರು. ಹಾಗೆಯೇ ಆ ಶಕ್ತಿಗೆ (ದೇವರು) ಒಂದು ರೂಪ (ಹೆಸರು) ಕೊಟ್ಟರು. ದೇವಾಲಯ ಕಟ್ಟಿಸಿದರು. ಹೀಗೆ ಹುಟ್ಟಿಕೊಂಡ ದೇವಾಲಯಗಳಲ್ಲಿ ಜನ ಸಾಮೂಹಿಕವಾಗಿ ಪೂಜಿಸತೊಡಗಿದರು. ಆರಾಧಿಸತೊಡಗಿದರು. ಆ ಸಾಮೂಹಿಕ ಆರಾಧನೆಯೇ ಮುಂದೆ ಉತ್ಸವಕ್ಕೆ ಮೂಲವಾಯಿತು.

ದೇವರೋತ್ಸವಗಳನ್ನು ಪೌರಾಣಿಕ ದೇವರೋತ್ಸವವೆಂದು ಅವುಗಳಲ್ಲಿ ಮಾರಿ, ಮಾಪುರ ತಾಯಿ, ಮೈಲಾರಲಿಂಗ, ವೀರಭದ್ರೇಶ್ವರ, ಪಾಪನಾಶಿನಿ, ಬೆನಕನಳ್ಳಿ ಎಲ್ಲಮ್ಮ ವಿಠಲ ಮುಂತಾದ ದೇವರುಗಳು ಬರುತ್ತವೆ. ಐತಿಹಾಸಿಕ ದೇವರೋತ್ಸವಗಳಲ್ಲಿ ಬಸವಣ್ಣ, ಚನ್ನಬಸವೇಶ್ವರ ಶಿವಯೋಗಿ, ಬಕ್ಕಪ್ರಭು, ಕ್ರೈಸ್ತರ ವಾರ್ಷಿಕ ಮುಂತಾದ ಹೆಸರುಗಳು ಇಂಥ ದೇವರೋತ್ಸವ ಐತಿಹಾಸಿಕ ದೇವರೋತ್ಸವಗಳು ಇಲ್ಲಿ ಪೂಜೆ, ಪ್ರಾರ್ಥನೆ, ಅಭಿಷೇಕ, ನೈವೇದ್ಯ, ಆರತಿ, ತೇರು ಉರುಳುಸೇವೆ, ಮುಂತಾದ ಆಚರಣೆಗಳು ಅಲ್ಲಿರುತ್ತವೆ.

ಜಗತ್ತಿನಲ್ಲಿರುವ ಪ್ರತಿಯೊಬ್ಬ ಮಾನವನ ಪ್ರತಿಯೊಂದು ಕಾರ್ಯಕಲಾಪಗಳು ದೇವರಿಂದಲೇ ಅವನ ಪ್ರೇರಣೆಯಂತೆಯೇ ನಡೆಯುತ್ತವೆಂದು ನಂಬಿಕೊಂಡಿದ್ದಾನೆ. ಇಂಥ ನಂಬಿಕೆಗಳು ಪ್ರತಿಯೊಂದು ಮತ–ಧರ್ಮಾನುಯಾಯಿಗಳಲ್ಲಿಯೂ ಇದ್ದೇ ಇರುತ್ತದೆ. ತನ್ನ ಜೀವನದಲ್ಲಿ ಹೆಣ್ಣು–ಮಣ್ಣು ಮತ್ತು ಹೊನ್ನು ಯಾವುದಕ್ಕೂ ಕೊರತೆ ಇರಬಾರದು. ಸಂತೋಷ ಆಯುಷ್ಯ, ಕೀರ್ತಿ, ಯುಕ್ತಿ, ಮುಕ್ತಿ, ಮುಂತಾದವು ಲಭಿಸಬೇಕು. ಪಾಪಕ್ಕೆ ಪರಿಹಾರ(ಕ್ಷಮೆ) ಮುಂತಾಗಿ ದೊರಕಿಸಿಕೊಳ್ಳಬೇಕು. ಎಂಬಂಥ ಆಸೆಗಳೇ(ಸ್ವಾರ್ಥವೇ) ಪ್ರಾರ್ಥನೆ–ಆರಾಧನೆ ಮತ್ತು ದೇವರೋತ್ಸವದ ಮುಖ್ಯ ಉದ್ದೇಶವಾಗಿರುತ್ತದೆ.

ಉತ್ಸವದ ಮೂಲಕ ದೇವರನ್ನು ವಂದಿಸುವುದು. ಸ್ತುತಿಸುವುದು, ಭಜನೆಮಾಡಿ ಹೊಗಳುವುದು, ಹೂ-ಹಣ್ಣುಗಳನ್ನರ್ಪಿಸುವುದು. ಸ್ನಾನ-ಪಾನ ಮಾಡಿಸುವುದು. ಕಾಣಿಕೆ ಕೊಡುವುದು, ಉಪವಾಸ ಮಾಡುವುದು, ಕುಂಭಮೇಳ ಏರ್ಪಡಿಸುವುದು, ಎಡೆಯೊಪ್ಪಿಸುವುದು, ಅಭಿಷೇಕ ಮಾಡಿಸುವುದು. ಧರ್ಮದ ಪ್ರತೀಕವಾಗಿ ಷಟ್‌ಸ್ಥಲ ಧ್ವಜ ಹಾರಿಸುವುದು. ವಟುಗಳಿಗೆ ಅಯ್ಯಾಚಾರ ಮಾಡುವುದು ಆತ್ಮಾಭಿಮಾನ ಮತ್ತು ಘನತೆ ಗೌರವಗಳ ಪ್ರತೀಕವಾಗಿ ನಂದೀಧ್ವಜ ಹಿಡಿದುಕೊಂಡು ಕುಣಿಯುವುದು. ತೇರು ದೇಹದ ಪ್ರತೀಕ, ದೇವರು ಕುಳಿತಿರುವ ತೇರು ಎಳೆದರೆ ಪಾಪ ಕರ್ಮಗಳೆಲ್ಲ ನಾಶವಾಗುತ್ತವೆಂದು ತೇರು ಜಗ್ಗುವುದು. ಮಳೆ ಬೆಳೆ ಸಕಾಲದಲ್ಲಿ ಬಾರದೆ ಇದ್ದಲ್ಲಿ ಉಟಗಿ, ಉರುಳುಸೇವೆ ಮಾಡುವುದು, ತನ್ನ ನಾಲಿಗೆ ರುಚಿಗೋಸ್ಕರ ದೇವರ ಹೆಸರಿನಲ್ಲಿ ಗಾವು(ಮೇಕೆ ಬಲಿ) ಕೊಡುವುದು. ಭೂತೇರಾಗುವುದು, ಮೂಢನಂಬಿಕೆಯ ಹಿನ್ನಲೆಯಲ್ಲಿ ಗುದ ಪೂಜೆ ಮಾಡುವುದು. ದಿಂಡಿ ನೆರವೇರಿಸುವುದು ಮೂಗುತಿ ಇಡುವುದು. ದೇವಾಲಯ ಕಟ್ಟಿಸುತ್ತೇನೆಂದು ಹರಕೆ ಮಾಡುವುದು. ಮುಂತಾದವುಗಳೆಲ್ಲ ಪ್ರಾರ್ಥನೆ ಆರಾಧನೆ-ಉತ್ಸವ ಚೌಕಟ್ಟಿಗೆ ಸೇರುತ್ತವೆ. ಕೋಳಿ ಅಂಕ, ಡೊಳ್ಳು ಬಾರಿಸುವುದು, ಕೋಲಾಟವಾಡುವುದು, ಬಡಿಗೆ ಆಟ ಇತ್ಯಾದಿಗಳ ಮನರಂಜನೆ ಜೊತೆಗೆ ದೈವೀರಾಧನೆಯ ಪ್ರತೀಕ ಕಲೆಗಳಾಗಿವೆ. ಪುಸ್ತಕ ಮಾರಾಟ ಮಳಿಗೆಗಳು, ಪ್ರವಚನ ಕೀರ್ತನೆಗಳು, ಧರ್ಮ ಗ್ರಂಥಗಳ ಪಠಣ ಇವು ಮುಕ್ತಿದಾಯಕ ಮಾರ್ಗದ ವಿಷಯಗಳು.

ಕೆಲವೊಂದು ಜನಗಳ ಉತ್ಸವದ ಜೊತೆಯಲ್ಲಿ ದನಗಳ ಉತ್ಸವ ಕೂಡ ಜರುಗುತ್ತದೆ. ದೂರದೂರಿಂದ ಬರುವ ಜನರ ಸೌಲಭ್ಯಕ್ಕಾಗಿ, ಸಮಯದ ಉಳಿತಾಯಕ್ಕಾಗಿ ದನಗಳ ಉತ್ಸವ ನಡೆಸುತ್ತಾರೆ. ಹತ್ತಾರು ಬಗೆಯ ಅಂಗಡಿ ಮುಗ್ಗಟ್ಟುಗಳು ಉತ್ಸವದಲ್ಲಿರುತ್ತವೆ. ತಮಗೆ ಬೇಕಾದ ವಸ್ತುಗಳು ಖರೀದಿಸಲು ಉತ್ಸವ ಅನುಕೂಲ ಮಾಡಿಕೊಡುತ್ತದೆ. ಬಂಧು ಬಳಗದವರನ್ನು ಭೇಟ್ಟಿಯಾಗಲು ಮೇಲು-ಕೀಳೆನ್ನದೆ ಸಾಮೂಹಿಕವಾಗಿ ಸೇರಲು, ಉತ್ಸವಗಳು ಮಹತ್ವದ ಸ್ಥಾನ ಪಡೆದುಕೊಂಡಿವೆ.

ಈ ಎಲ್ಲ ಆಚರಣೆ ಮತ್ತು ವ್ಯವಸ್ಥೆಗಳ ಹಿನ್ನಲೇ ಒಂದೇ ಮಾತಿನಲ್ಲಿ ಹೇಳುವುದಾದರೆ ಅತಿ ಆಸೆಯೆಂದೇ ಹೇಳಬೇಕು. ಅತಿ ಆಸೆಯೆಂದರೆ ಒಬ್ಬಾತನು ತನ್ನ ನಿಜವಾದ ಯೋಗ್ಯತೆಗಿಂತಲೂ ಅತಿಯಾಗಿ ಹೆಚ್ಚಾಗಿ ಪಡೆಯಲು, ಅನುಭವಿಸಲು, ಹವಣಿಸುವುದು ಎಂದರ್ಥ.

ಜಾತಿ-ಮತಗಳನ್ನು ಮರೆತು ರಾಷ್ಟ್ರೀಯ ಭಾವೈಕ್ಯತೆಯ ಹಿನ್ನಲೆಯಲ್ಲಿ ದೇವರೋತ್ಸವಗಳು ಜರುಗುತ್ತವೆ. ಹತ್ತಾರು ಕಡೆಗಳಿಂದ ಜನರು ಬಂದು ಸೇರುತ್ತಾನೆ. ಶೀಲ, ಧರ್ಮ, ಸಹಬಾಳ್ವೆಯಿಂದ ಜೀವನ ನಡೆಸಲು, ನೀತಿಯ ಮಾತುಗಳು ಕೇಳಲು ಮನರಂಜನೆಯಲ್ಲಿ ಪಾಲ್ಗೊಳ್ಳಲು ಹಾತೊರೆಯುತ್ತಾರೆ. ಹೀಗಾಗಿಯೇ ಪ್ರಾಚೀನ ಕಾಲದಿಂದಲೂ ಭಜನೆ, ಡೊಳ್ಳು, ಹಲಗೆ, ಕೋಲಾಟ, ನಂದಿಕೋಲು, ಪುರವಂತಿಕೆ ಮತ್ತು ಭೂತೇರು

ಮುಂತಾದ ಜನಪದ ಪ್ರದರ್ಶನ ಕಲೆಗಳು, ಉತ್ಸವಗಳಲ್ಲಿ ಮಹತ್ವದ ಸ್ಥಾನ ಇನ್ನು ಉಳಿಸಿಕೊಂಡಿವೆ.

ದೇವರೋತ್ಸವಗಳು ಸಾಮಾಜಿಕ ಭಾವೈಕ್ಯದ ಸಾಂಕೇತವಾಗಿ ಶಾಶ್ವತವಾಗಿ ಮುಂದುವರಿಸಲು ಕೆಲವೊಂದು ಸುಧಾರಣೆಗಳನ್ನು ಜಾರಿಗೆ ತರುವುದು ಅವಶ್ಯಕವಾಗಿದೆ.

1) ಪಶು ಪ್ರಾಣಿಗಳ ಬಲಿಯು ಕೇವಲ ನರಮಾನವನ ನಾಲಿಗೆ ರುಚಿಗೋಸ್ಕರ ಹೊರತು ಮತ್ತೊಂದಿಲ್ಲ. ಯಾವ ಉತ್ಸವದಲ್ಲಿ ಪ್ರಾಣಿ ಹಿಂಸೆಯು ನಡೆಯುತ್ತಲಿದೆಯೋ ಅದು ಅಲ್ಲಿ ನಿಲ್ಲುವಂತೆ ಜನರಲ್ಲಿ ತಿಳುವಳಿಕೆ ಹುಟ್ಟಿಸುವುದು.

2) ದೇವರೋತ್ಸವಗಳಲ್ಲಿ ಜನಸಾಮಾನ್ಯರೇ ಹೆಚ್ಚಾಗಿರುತ್ತಾರೆ. ಇವರ ಬುದ್ಧಿಮಟ್ಟ ಹೆಚ್ಚು ಕಡಿಮೆಯಾಗಿರುತ್ತದೆ. ಆದ್ದರಿಂದ ಅವರೆಲ್ಲರಿಗೂ ಒಂದೇ ವಿಧವಾದ ಉಪದೇಶ ಮಾಡುವುದು ಸರಿಯಲ್ಲ. ಶ್ರೀ ಸಾಮಾನ್ಯರಿಗೆ ಹಾಡುಗಳ ಮೂಲಕ ಉಪದೇಶ ಮುಖ್ಯವಾದರೆ ಕೆಲವರಿಗೆ ಉಪನ್ಯಾಸದ ಉಪದೇಶ ಪ್ರಮುಖವಾಗುತ್ತದೆ. ಅವರಲ್ಲಿರುವ ಹತ್ತಾರು ಬಗೆಯ ಸಾಮಾಜಿಕ ದೋಷಗಳನ್ನು ತಿಳಿಸಬೇಕು. ಆರೋಗ್ಯದ ರೀತಿ ನೀತಿಗಳನ್ನು ಗೊತ್ತು ಮಾಡಬೇಕು. ಮನೆಯ ಸ್ವಚ್ಛತೆ ಗ್ರಾಮ ಸ್ವಚ್ಛತೆ, ಜನಸಂಖ್ಯೆ ನಿಯಂತ್ರಣ, ಸಾಂಕ್ರಾಮಿಕ ರೋಗ ಹೆಚ್ಚಿದ್ದಾಗ ನಡೆದುಕೊಳ್ಳಬೇಕಾದ ರೀತಿ–ರಿವಾಜುಗಳನ್ನೆಲ್ಲಾ ತಿಳಿಸಬೇಕು.

3) ಕುಸ್ತಿ ಕಸರತ್ತು ಮೊದಲಾದ ದೇಹಶಕ್ತಿಯನ್ನು ಹೆಚ್ಚಿಸುವ ಅನೇಕ ವಿಧವಾದ ಆಟಗಳನ್ನು ಉತ್ಸವದ ಸಮಯದಲ್ಲಿಟ್ಟು ಅವುಗಳಿಗೆ ಯೋಗ್ಯವಾದ ನಗದು ಹಣ, ಪ್ರಶಸ್ತಿ–ಪತ್ರ ಬಹುಮಾನಗಳನ್ನು ಕೊಟ್ಟು, ಜನರ ಶಾರೀರಿಕ ಶಕ್ತಿ ಬೆಳೆಯುವಂತೆ, ಮಾಡಬೇಕು. ಉತ್ಸವ, ಯಶಸ್ವಿಯಾಗಿ ನೆರವೇರಬೇಕಾದರೆ ಮುಖ್ಯವಾಗಿ ಉತ್ಸವ ಜರುಗುವ ಸ್ಥಳಗಳಲ್ಲಿ ನೀರು ನೆರಳಿನ ಸೌಕರ್ಯ, ವಿದ್ಯುತ್ ದೀಪದ ವ್ಯವಸ್ಥೆ ಮತ್ತು ಜಾನುವಾರುಗಳಿಗೆ ಆಹಾರ ವ್ಯವಸ್ಥೆ ಇರಬೇಕು.

4) ಜನಸಾಮಾನ್ಯರ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ದೇವರೋತ್ಸವಗಳು ಸಹಾಯಕವಾಗಬೇಕು. ದೇವರೋತ್ಸವಗಳಲ್ಲಿ ಮಾರಾಟಕ್ಕೆ ಸುತ್ತ–ಮುತ್ತಲಿನ ಅನೇಕ ಪದಾರ್ಥಗಳು ಬರುತ್ತಿವೆಯಷ್ಟೇ ಅವುಗಳನ್ನೆಲ್ಲಾ ಬೇರೆ ಬೇರೆ ಸಾಲು ಅಂಗಡಿಗಳನ್ನಾಗಿ ವ್ಯವಸ್ಥೆಯಿಂದ ಇಡಿಸಬೇಕು.

5) ಅಚ್ಚುಕಟ್ಟಾಗಿಯೂ ಸ್ವಚ್ಛತೆಗೆ ಲೋಪಬರದಂತೆಯೂ ಅಂಗಡಿ ಸಾಲುಗಳಿರಬೇಕು. ಹಳ್ಳಿಗಳ ಅಭಿವೃದ್ಧಿ ಕುರಿತು ಉತ್ಸವಗಳಲ್ಲಿ ಪ್ರಚಾರ ನಡೆಸಬೇಕು. ಮಣ್ಣಿನ ಪಾತ್ರ, ಬಿದರಿನ ಸಾಮಾನು, ಬಿದರಿನ ಕಲೆ, ಕರಕುಶಲ ವಸ್ತುಗಳು, ತರಸಿ ಮಾರಾಟಕ್ಕೆ ಇರಿಸಬೇಕು. ಈ ಕಲೆಯಲ್ಲಿ ಯಾರು ಯಾವುದು ಚೆನ್ನಾಗಿ ಮಾಡಿರುತ್ತಾರೆ ಅವರಿಗೆ ಆ ಕಲೆಯಲ್ಲಿ ಬಹುಮಾನ ಕೊಟ್ಟು ಪ್ರೋತ್ಸಾಹಿಸಬೇಕು. ಅದೇ ಪ್ರಕಾರ

ವ್ಯವಸಾಯದಲ್ಲಿ ಯಾರು ಯಾವ ಕಲೆ ಯಾವ ಬೆಳೆಯನ್ನು ಚೆನ್ನಾಗಿ ಬೆಳೆದು ಪ್ರದರ್ಶನಕ್ಕೆ ತಂದಿರುತ್ತಾರೆಯೋ ಅವರಿಗೂ ಬಹುಮಾನಗಳನ್ನು ಕೊಡಬೇಕು.

6) ಒಕ್ಕಲಿಗರು ಅನೇಕ ಪ್ರಕಾರದ ಕಾಯಿ ಪಲ್ಲೆಗಳನ್ನು ಬೆಳೆಯುತ್ತಿರುತ್ತಾರೆ. ಅವುಗಳಲ್ಲಿ ಉತ್ತಮವಾಗಿ ಬೆಳೆದು ತಂದವರನ್ನು ಹುರಿದುಂಬಿಸಬೇಕು. ರಸಗೊಬ್ಬರದ ಪರಿಜ್ಞಾನ ನೀಡಬೇಕು. ಹೆಚ್ಚಾನು ಹೆಚ್ಚು ಕಾಯಿಪಲ್ಲೆ ಬೆಳೆಗಳನ್ನು ಬೆಳೆಯುವಂತೆ ಸಲಹೆ ಸೂಚನೆ ನೀಡಬೇಕು. ಪರಿಸರ ಮಾಲಿನ್ಯ ಹೋಗಲಾಡಿಸಲು ಬಯಲು ಪ್ರದೇಶ ಇಲ್ಲವೆ ಹೊಲದ ಕಟ್ಟೆಯ ಮೇಲೆ ಮತ್ತು ಮನೆಯ ಮುಂದೆ ಗಿಡ ಮರಗಳು ಬೆಳೆಸುವಂತೆ, ಅರಣ್ಯ ಇಲಾಖೆಯ, ಸಹಾಯ ಪಡೆದು ಸಸಿಗಳು ಉಚಿತವಾಗಿ ಕೊಡಬೇಕು.

7) ಕೆಲವೊಂದು ದೇವರೋತ್ಸವಗಳು ಜರುಗುವಾಗ ದನದ ಜಾತ್ರ ಜರಗುತ್ತದೆ. ಅಂತಹ ಸಂದರ್ಭದಲ್ಲಿ ದೂರದಿಂದ ಒಳ್ಳೆಯ ಆಕಳು ಕರು, ಎಮ್ಮೆ, ಎತ್ತುಗಳನ್ನು ಸಾಕಿ ಪುಷ್ಟವಾಗಿ ಬೆಳೆಸಿ ಉತ್ಸವಕ್ಕೆ ತರುವ ಮುಂಚೆಯೇ ಸುತ್ತ-ಮುತ್ತಲಿನ ಜನರಿಗೆ ತಿಳಿಸಬೇಕೆ. ಕರಪತ್ರ ಹಂಚಬೇಕು. ಪತ್ರಿಕೆಗಳಲ್ಲಿ ಜಾಹೀರಾತು ಕೊಡಬೇಕು. ಹೀಗೆ ತಂದಿರುವರಲ್ಲಿ ಚೆನ್ನಾಗಿ ಸಾಕಿದವರಿಗೆ ಬಹುಮಾನ ಕೊಟ್ಟು ಇಲ್ಲವೆ ಸನ್ಮಾನ ಮಾಡಿ ಪಶು ಪ್ರಾಣಿಗಳ ಜೋಪಾನ ಸರಿಯಾದ ರೀತಿಯಲ್ಲಿ ಮಾಡಲು ಹೇಳಿ ಸಹಕರಿಸಬೇಕು.

8) ನಮ್ಮ ದೇಶದಲ್ಲಿ ಜನಸಂಖ್ಯೆ ಸ್ಫೋಟಕದಂತೆ, ಬೆಳೆಯುತ್ತಿದೆ. ನೂರಾರು ಸಮಸ್ಯೆಗಳು ಹುಟ್ಟುತ್ತಿವೆ. ಉದಾ: ಅಪರಾಧ, ನಿರುದ್ಯೋಗ, ಬಡತನ, ವ್ಯಭಿಚಾರ, ಇಂಥ ಸಮಸ್ಯೆಗಳಿಂದ ಸಮಾಜ ಹಾಳಾಗುತ್ತಿದೆ. ನಂಬಿಕೆ, ಪ್ರೀತಿ, ಪ್ರೇಮ ಮಸಂ ಸೇರುತ್ತಿದೆ. ಇದಕ್ಕೆಲ್ಲ ಕಾರಣ ಜನಸಂಖ್ಯೆಯೇ. ಹೀಗಾಗಿ ಪ್ರತಿಯೊಬ್ಬ ಭಾರತೀಯ ನಾಗರಿಕ ಒಂದು ಮಗು ಹಡೆದು ಕುಟುಂಬ ಯೋಜನೆ ಮಾಡಿಸಿಕೊಳ್ಳಬೇಕೆಂಬ ಕಳಕಳಿಯ ಮನವಿ ಉತ್ಸವದ ಸಂದರ್ಭದಲ್ಲಿ ಮಾಡಿ ದೇಶದ ಅಭಿಮಾನ ಹುಟ್ಟಿಸಬೇಕು.

9) ಒಂದೊಂದು ಉತ್ಸವದ ಒಂದೊಂದು ಮತದವರೇ ಹೆಚ್ಚಾಗಿ ಸೇರುತ್ತಾರೆ. ಅದು ಇಂಥ ಮತದವರ ಉತ್ಸವ ಎನ್ನುವ ಪದ ಯಾರ ಬಾಯಿಯಿಂದಲೂ ಬರಬಾರದು ಯಾವುದೇ ಜಾತಿಯ ದೇವರ ಉತ್ಸವ ಇರಲಿ, ಅಲ್ಲಿ ಎಲ್ಲ ಪಂಥದವರು ಸೇರಿ ಕೆಲಸ ಮಾಡುವುದರಿಂದ ಪರಸ್ಪರರಲ್ಲಿ ಪ್ರೇಮಾಧಾರಗಳು ಹೆಚ್ಚುತ್ತವೆ. ಮತ ವೈಷಮ್ಯಗಳು ಅಳಿಯುತ್ತವೆ. ಸಂಘಟನೆಯೂ ಹೆಚ್ಚುತ್ತದೆ. ಕೆಲವೊಂದು ದೇವರೋತ್ಸವಗಳಲ್ಲಿ ಸುರಿಮಳೆಯಂತೆ ಹಣ ಖರ್ಚು ಮಾಡಿ ಉತ್ಸವ ನಡೆಸುತ್ತಾರೆ. ತುಪ್ಪ ಹಾಲಿನ ಅಭಿಷೇಕ ಮಾಡಿಸುತ್ತಾರೆ. ಮದ್ದು ಸುಡುವ ದುಂದುಗಾರಿಕೆ ಕೆಲವು ದೇವರೋತ್ಸವಗಳಲ್ಲಿ ನಡೆಯುತ್ತಿದೆ. ಅದು ಸಂಪೂರ್ಣ ನಿಲ್ಲಬೇಕು. ಅದೇ ವಿಧವಾದ ಜಾನಪದ ಕಲಾವಿದರಿಗೆ ಪ್ರೋತ್ಸಾಹಿಸಲು ಸ್ಪರ್ಧೆಯನ್ನು ಏರ್ಪಡಿಸಬೇಕು.

ಉತ್ತಮ ಕಲಾವಿದರಿಗೆ ಉತ್ತೇಜನ ಕೊಡಬೇಕು. ಇದರಿಂದ ಅವರಲ್ಲಿರುವ ಕಲೆ ಉಳಿಯುತ್ತದೆ.

ಉತ್ಸವ ಜರುಗುವಾಗ ನೀರಿನ ಪೂರೈಕೆ ಸರಿಯಾಗಿರುವುದಿಲ್ಲ ಅಲ್ಲಲ್ಲಿಯೇ ಮಾತ್ರ ವಿಸರ್ಜನೆ ಚಿಕ್ಕ ಚಿಕ್ಕ ಮಕ್ಕಳ ಕಕ್ಕಸದಿಂದ ಹೊಲಸು ಹೆಚ್ಚು, ಆರೋಗ್ಯಕರವಾದ ಏರ್ಪಾಡುಗಳಿರುವುದು ಕಡಿಮೆ ಹೀಗಾಗಿ ಉತ್ಸವ ನಂತರ ಉತ್ಸವಕ್ಕೆ ಬಂದು ಹೋದವರಿಗೆ ಮತ್ತು ಸ್ಥಳೀಯ ಜನರಲ್ಲಿ ಅನೇಕ ರೋಗಗಳುಂಟಾಗುತ್ತವೆ. ಉತ್ಸವಕ್ಕೆ ಬಂದವರು ರೋಗಪೀಡಿತರಾಗುತ್ತಾರೆ. ಇದನ್ನು ತಪ್ಪಿಸಲು ಸ್ಥಳೀಯ ಆರೋಗ್ಯ ಇಲಾಖೆಯ ಸಹಾಯ ಪಡೆದು ಮುನ್ನೆಚ್ಚರಿಕೆ ಕ್ರಮ ಜರುಗಿಸುವುದು ಒಳ್ಳೆಯದು.

ಸುರ ಸುಂದರಿ ಹೆಣ್ಣು ಹುಡುಗಿಯರು ಉತ್ಸವದಲ್ಲಿ ಕಂಡು ಬಂದರೆ ಕಾಮುಕರು ಅತ್ಯಾಚಾರ ನಡೆಸುತ್ತಾರೆ. ಇಲ್ಲವೆ ಆಶ್ಚರ್ಯವಾಗಿ ಹಾರಿಸಿಕೊಂಡು ಓಡಿ ಹೋಗುತ್ತಾರೆ. ಕಳುವು ಅಲ್ಲಲ್ಲಿ ನಡೆಯುತ್ತಲೆ ಇರುತ್ತದೆ. ಇಂತಹವುಗಳನ್ನೆಲ್ಲ ನಡೆಯದಂತೆ, ನೋಡಿಕೊಳ್ಳಲು ಉತ್ಸವದ ವ್ಯವಸ್ಥಾಪಕ ಮಂಡಳಿಯವರು ಸಾಕಷ್ಟು ಸ್ವಯಂ ಸೇವಕರನ್ನು ನೇಮಿಸಿಕೊಳ್ಳಬೇಕು. ಇಲ್ಲವೇ ಪೋಲೀಸ್ ಇಲಾಖೆಯ ಸಹಾಯ ಪಡೆದುಕೊಳ್ಳಬೇಕು.

ಜನಸೇವೆಯೇ ನಿಜವಾದ ದೇವರ ಸೇವೆ ಎಂದವರಿಗೆ ಉತ್ಸವದ ಕಾಲವು ಸುಸಮಯ. ದೇಶ ಸೇವಕರಿಗಿಂತಲೂ ಉತ್ಸವಗಳ ಸುಧಾರಣೆಯ ಕಾರ್ಯವೂ ಬಹು ಅಗತ್ಯವೂ, ಮುಖ್ಯವೂ ಅದುದೆಂದು ಹೇಳಬೇಕಾದುದೇ ಇಲ್ಲ. ದೇವರೋತ್ಸವಗಳು ನವೆಂಬರ ತಿಂಗಳಿಂದ ಮೇ ತಿಂಗಳ ಕೊನೆಯ ವಾರದವರೆಗೆ ಜರುಗುವುದೇ ಹೆಚ್ಚು. ಆ ಸಮಯ ಜನರಿಗೆ ಎಲ್ಲ ರೀತಿಗಳಿಂದಲೂ ಅನುಕೂವೆಂದೇ ಉತ್ಸವಗಳನ್ನು ಏರ್ಪಡಿಸುತ್ತಾರೆ. ಸಹಸ್ರಾರು ಜನರು ಉತ್ಸವಗಳಲ್ಲಿ ಕೂಡುವ ಪ್ರಸಂಗ ಬರುತ್ತದೆ. ಇವರೆಲ್ಲರೂ ಸ್ವ ಸಂತೋಷದಿಂದ ಎಷ್ಟೋ ಶ್ರಮವಹಿಸಿ ಸಾಲ ಮಾಡಿಕೊಂಡು ಉತ್ಸವಕ್ಕೆ ಬರುತ್ತಾರೆ. ಕೆಲವರು ಅನುಕೂಲಸ್ಥರು ಇರಬಹುದು. ಅವರವರ ಊಟೋಪಚಾರಗಳಿಗಾಗಿ ನಾವೇನೂ 'ಖಾಂಡ' ಏರ್ಪಾಡು ಮಾಡಬೇಕಾಗಿಲ್ಲ. ಏಕೆಂದರೆ ದೇವರೋತ್ಸವಕ್ಕೆ ಬಂದವರಲ್ಲಿ ಹಣವಂತೂ ಇದ್ದೆ ಇರುತ್ತದೆ. ಕೆಲವರಂತೂ 2–3 ದಿನಗಳಾಗುವಷ್ಟು ಬುತ್ತಿಯನ್ನು ತಂದಿರುತ್ತಾರೆ.

ಇಂತಹ ಜನ ತಮ್ಮ ತಮ್ಮ ವೆಚ್ಚದಿಂದಲೇ ಉತ್ಸವಕ್ಕೆ ಬಂದು ಎಷ್ಟೋ ಹಣ ವ್ಯಯ ಮಾಡುತ್ತಾರೆ. ಬೇರೆ ಬೇರೆ ಸ್ಥಳಗಳಿಂದ, ಹಳ್ಳಿಗಳಿಂದ, ಹೆಂಗಸರನ್ನು ಮತ್ತು ಗಂಡಸರನ್ನು ನಾವು ಒಂದು ಪವಿತ್ರ ಸ್ಥಳಕ್ಕೆ ಕರೆಯಸಲಿಕ್ಕಾಗುವುದೇ? ಕರೆಯಿಸುವುದಾದರೆ ಎಷ್ಟು ಹಣ ವೆಚ್ಚವಾಗಬಹುದು. ಎಷ್ಟು ಶ್ರಮ ಪಡಬೇಕಾಗಬಹುದು. ಅಂದ ಮೇಲೆ ತಾವಾಗಿಯೇ ಬಂದ ಜನರಿಗೆ ಅವರವರ ಹಿತದ ನಾಲ್ಕಾರು ಮಾತುಗಳನ್ನು ತಿಳಿಸುವುದು, ಸೇವಕರ ಕರ್ತವ್ಯವೆಲ್ಲವೇ? ಅನೇಕ ಜನರು ತಪ್ಪು ತಿಳುವಳಿಕೆಯಿಂದಲೇ ಉದಾ: ಪಶುಬಲಿ, ಬೆತ್ತಲೆ ಸೇವೆ, ಬಸವಿ

ಬಿಡುವ ಪದ್ಧತಿ, ಪವಿತ್ರ ತೀರ್ಥಯೆಂದು ಹೊಲಸು ನೀರಿನಲ್ಲಿ ಸ್ನಾನ ಮಾಡುವುದು ಕುಡಿಯುವುದು. ಹುಟ್ಟಿದವರಿಗೆ ದೇವರು ಹುಲ್ಲು ಮೆಯಿಸಲಾರ, ಎಂಬಂತೆ ಸಾಕಷ್ಟು ಮಕ್ಕಳು ಹಡೆದು ಬೀದಿ ಬಸವನಂತೆ ಮಕ್ಕಳಿಗೆ ಬಿಡುವುದು, ಬೇಗ ಶ್ರೀಮಂತನಾಗಬೇಕೆಂದು ಮಟಕಾ, ಜೂಜಾಟ ಆಡುವುದು, ಕುಡಿದು ತಿಂದು ಹಾಳಾಗುವುದು, ನಗರದಲ್ಲಿ ಅಲೆದಾಡುವುದು. ಇಂಥಹ ನೂರಾರು ತಪ್ಪು ತಿಳಿವಳಿಕೆಗಳಿಂದಲೇ ಕಷ್ಟಗಳಿಗೊಳಗಾಗುತ್ತಿದ್ದಾರಲ್ಲದೆ ನಮ್ಮ ಜನ.

ಉತ್ಸವಕ್ಕೆ ಬಂದ ಜನರ ಆರ್ಥಿಕ, ಸಾಮಾಜಿಕ, ಶಾರೀರಿಕ ಮತ್ತು ಸಾಂಸ್ಕೃತಿಕ ಉನ್ನತಿಗಾಗಿ ಎಷ್ಟೋ ಸಂಗತಿಗಳನ್ನು ಉತ್ಸವದ ಕಾಲದಲ್ಲಿ ತಿಳಿಸುವುದು, ಪ್ರಯೋಜನಕಾರಿಯಾಗುವುದಿಲ್ಲವೆ? ಉತ್ಸವಕ್ಕೆ ಬಂದ ಪ್ರತಿ ವ್ಯಕ್ತಿಯೂ ಏನಾದರೂ ಹೊಸ ಸಂಗತಿಯನ್ನು ತಿಳಿದುಕೊಂಡು ಹೋಗಿ ತನ್ನ ನಡಾವಳಿಕೆಯಲ್ಲಿ ತರುವಂತೆ ಮಾಡುವುದು. ದೇಶ ಸೇವಕರ ಮುಖ್ಯ ಕೆಲಸವಾಗಿಲ್ಲವೆ? ಅಖಂಡವಾಗಿ ಕೆಲವು ವರ್ಷ ದೇವರೋತ್ಸವಗಳಲ್ಲಿ ಇಂಥ ಪ್ರಚಾರ ಮತ್ತು ತಿಳಿವಳಿಕೆ ನೀಡಿದ್ದಾದರೆ ಹಳ್ಳಿಯ ಜನರಲ್ಲಿ ಎಷ್ಟೋ ವಿಚಾರ ಕ್ರಾಂತಿಯಾಗದೆ ಇರದು. ಈ ನಿಟ್ಟಿನಲ್ಲಿ ಉತ್ಸವಗಳು ಜರುಗಿದ್ದರೆ ಅವುಗಳಿಗೊಂದು ಮಹತ್ವ ಬರುತ್ತದೆ ಮತ್ತು ಹೆಚ್ಚುತ್ತದೆ.

## ದೇವರ ಉತ್ಸವ

ನಡಿಯೋ ದೇವರ ಉತ್ಸವಕ್ಕೆ
ಮುಕ್ತಿ ಪಡೆಯಲಿಕ್ಕೆ
ಬಯಲೊಳು ಬಯಲದಲ್ಲಿ ಹುಟ್ಟಿಸಿದ
ತನ್ನಲ್ಲಿ ಭಯದ ಬಾಗಿಲು ಕಟ್ಟಿಸಿದ
ನಡಿಯೋ ದೇವರ ಉತ್ಸವಕ್ಕೆ . . . .

ಭವದ ಮುದ್ರೆಯ ದಾಟುತ
ಭಕ್ತಿ ಬಾವದ ಹಂದರದಲ್ಲಿ
ನೇಮ ಹಿಡಿಯುತ
ಭಾವದ ಹಿನ್ನಲೆಯಲ್ಲಿ
ನಡಿಯೋ ದೇವರ ಉತ್ಸವಕ್ಕೆ . . . .

ಮುಕ್ತಿದೊಡೆಯ ಪಾಪನಾಶಿಲಿಂಗ
ಪಾಪ ಹರಿಸಿಕೊಳ್ಳಲು
ಮುಕ್ತಿ ಪಡೆಯಲು
ನಡಿಯೋ ದೇವರ ಉತ್ಸವಕ್ಕೆ . . . .

ಪಾಪಕರ್ಮವ ಬಿಟ್ಟು
ಮುಕ್ತಿ ಮಹಿಮೆಯ ಪಟ್ಟು
ಎಲ್ಲವನು ಬಿಟ್ಟು ಬಿಟ್ಟು
ನಡಿಯೋ ದೇವರ ಉತ್ಸವಕ್ಕೆ . . . .

## ಹರಕೆ

ಅತ್ತೀಗೆ ಹಡೆಯಲಿ ಹತ್ತೆಮ್ಮಿ ಕರೆಯಲಿ
ಹಿತ್ತಲ ಬಾಳಿ ಬೆಳೆಯಲಿ : ನನರಾಯ
ನಮ್ಮೂರ ಜಾತ್ರೆ ನಡೆಯಲಿ

ಸುರಮೂರ ಬೆಳೆಯಲಿ ಸುರಮೂರ ಬಿತ್ತಲಿ
ಸುರಮೂರ ಗುಡ್ಡ ಚಿಗಿಯಲಿ : ನನ್ನಂಥ
ಗರತಿಯರು ಪಲ್ಲಕ್ಕಿ ಏತ್ತಲಿ

ಹಸಗೂಸು ಹುಟ್ಟಲಿ ಹೊಸ ಪ್ಯಾಟಿ ಕಟ್ಟಲಿ
ರಸಬಾಳಿ ಕಬ್ಬು ಬೆಳೆಯಲಿ : ನಮ್ಮೂರ
ಬಸವನ ತೇರು ಏಳೆಯಲಿ

ಭಾಗಾದಿ ಬಲಕಿರಲಿ ವೈರಿ ತಾ ಎಡಕಿರಲಿ
ಛಾಡಿ ಹೇಳುವರು ನಿನ ಮನಿಯ ಇದರಿರಲಿ : ಬಲಭೀಮ
ದೇವ ನನ ಮ್ಯಾಲ ದಯೆಯಿರಲಿ

ಅತ್ತಿಗೆ ಬಸುರಾಗ್ಲಿ ಹತ್ತೆಮ್ಮೆ ಕರೆಯಲಿ
ಅತ್ತೆಮ್ಮ ಎಂದು ಕರೆಯಲಿ : ಅಣ್ಣಯ್ಯ
ಮಾರಿಯ ಜಾತಿರೀ ನೀ ಮಾಡು

ಹಾಗಲ ಬಳ್ಳೀಗಿ ಹಂದರ ಹಾಕೀನ
ಗಿಂಡೀಲೆ ನೀರು ಸುರವೀನ : ನನ ತಮ್ಮ
ಜಾತಿರಿಯ ಜನರು ಹರಿಯಲಿ

## ಮಳೆರಾಯನಿಗೆ ಕರೆ

ಮಳಿಯಪ್ಪ ಮಳಿರಾಜ ಕರೆಯುತಾರೊ ನಿನ್ನ
ಮೊದಲು ಕೂರಿಗೆ ರೈತಾರು–ಹೊಲದಾಗ
ಮುಂಜಾನೆ ತೇರು ಹರಿದಾವೆ

ಬಿತ್ತಿ ಬಂದಣ್ಣ ಮುತ್ತಿನ ಕಂಬ ಸೇರಿ
ಬಿತ್ತಿ ಬಂದೆ ಶಿವನ ಮಳೆಯಿಲ್ಲ–ಅಂದಾಗ
ಅಪ್ಪನ ಉತ್ಸವ ನಡದಾದೆ

ಕಂಚು ಮಿಂಚೀತು ಕಾಳಸ್ತ್ರ ಗಡುಗೀತು
ಶಿವಗಂಗ್ಯಾಗಿಂದ ಹನಿಬಿದ್ದು ಪರ್ವತದ
ಗಿರಿಮ್ಯಾಲೆ ಕೂಡಿ ಹರಿಯೀತು

ಮೂಡಲ ಸೀಮೆಗೆ ಹೋಗಿಬಾರೊ ಮಳೆರಾಯ
ಕಗ್ಗಲ ನನ್ನ ತವರೂರಿಗೆ – ಹೋಗಿ
ಜಗ್ಗೀಸಿ ಹುಯ್ಯೋ ಮಳೆರಾಯ

ಹತ್ತೇರು ಕಟ್ಟಿ ಮತ್ತೆ ಮಳೆರಾಯ ಬಂದ
ಮುತ್ತು ಚೆಲ್ಲಯ್ಯ ಹೊಲಕೆಲ್ಲ–ಅಣ್ಣಯ್ಯ
ಮತ್ತೆ ಧಾನ್ಯವು ಬೆಳೆಯಾಗಲಿ

## ಚೌಡಮ್ಮನ ಪದ

ತುಂಬೆ ಮಾನಂಗೆ ತುಂಬತಲ್ಲೆ ನಿನ್ನ ಪರಿಸೆ
ಕಡಲೆಕಾಯಿ ನಂಗೆ ಕಡೆತಲ್ಲೆ ៖ ನಿನ್ನ ಪರಿಸೆ
ವರುಷಕೊಂದು ಸರಿ ತುಂಬೀತು
ಬೆಕ್ಕರೆ ಸುತ್ತ ಕಲ್ಲಿಲ್ಲ ಮುಳ್ಳಿಲ್ಲ
ಸೋಸಿ ಬಿತ್ತವಳೆ ಎಸೆಜವನ ៖ ಚೌಡಮ್ಮ
ಜಾತರಿಗೆ ಬಂದೋರು ಕೊಂಡೋಗಿ
ಜಾತರಿಗೆ ಬಂದೋ ಚೆನ್ನರನ್ನದ ವಡಿವೆ
ಜಾತರಿಗೆ ಬಂದೋರು ಕೊಂಡೋಗಿ ៖ ಚೌಡಮ್ಮ
ವರುಷಕ್ಕೊಂದು ಜಾತ್ರೆಗೆ ಬಂದೋಗಿ
ಬಣ್ಣಾದ ಬಳಿಬಂದೋ ನನ್ನಣ್ಣ ಊರಲ್ಲಿಲ್ಲ
ಈ ನಾಡಲಿಂತ ಬಳೆಯಿಲ್ಲ៖ ಚೌಡಮ್ಮ
ಜಾತರಿಗಿ ಬಂದು ನೋಡುಬಾರೆ

## ವೀರಭದ್ರನ ಪದ

ತೇರು ಬೀದೀಲಿ ಏನೇನೊ ಐಭೋಗ
ಬಾಯಾರಿ ಬಂದೋರಿಗೆ ಭೂಮಾ ಅನ್ನ
ತಿಳಿ ನೀರು
ತೇರು ಬೀದೀಲಿ

ವೀರಭದ್ರ
ಉದ್ದನ ತೇರು, ಬಾನ ಮುಟ್ಟುವ ಕಳಸ
ಹುಮನಾಬಾದಿ ಊರ
ಹರಿದಾದೊ
ಹಜಾರೋ ಜನರ
ಮೇಲಿಂದ
ಹರಿದಾದೋ ನಿನ ತೇರ
ಅಪ್ಪ ವೀರಭದ್ರ
ಇಲ್ಲಿಂದ ಕೈಯ್ಯ ಮುಗಿದೇನ

# ವೀರಭದ್ರನ ಜಾತ್ರೆ

ನಡಿ ತಮ್ಮ ನಡಿ ಅಣ್ಣ
ವೀರಭದ್ರೇಶ್ವರನ ಜಾತ್ರಿಗಿ
ಹುಮನಾಬಾದಿ ಎಂಬ ಊರ
ಅಲ್ಲಿ ಹಾನ ವೀರಭದ್ರ ದೇವರ
ಜಾತ್ರಿ ನಡಿತಾದ ಜೋರ
ನಡಿ ತಮ್ಮ ನಡಿರಣ್ಣ
ವೀರಭದ್ರನ ಜಾತ್ರಿಗಿ

ಸುತ್ತಮುತ್ತಲಿನ ಭಕ್ತರು
ಜಾತ್ರಿಗಿ ಬರ್ತಾರ ಜೋರ
ದೇವರ ಕೊಂಡಾಡಿ
ಅಗ್ಗಿ ತುಳಿತಾರೆ
ನಡಿ ತಮ್ಮ ನಡಿರಣ್ಣ
ವೀರಭದ್ರನ ಜಾತ್ರಿಗಿ

ಜಾತ್ರಿಯಲಿ ನನಗೂ ನಿನಗೂ
ನೆಂಟರು ಸೀಗುತಾರ
ನಕ್ಕು ನಲಿದು ಮಜಾ ಮಾಡಿ
ಊಟ ಮಾಡೋಣ ನಡಿ ತಮ್ಮ ನಡಿರಣ್ಣ
ವೀರಭದ್ರೇಶ್ವರ ಜಾತ್ರಿಗಿ

ಅಳ್ಳು ಮಟಾಣಿ ಬೆಂಡಲ ಬತ್ತಾಸಿ
ಉಡುದಾರ ಕಾಸಿದಾರ
ಖರೀದಿ ಮಾಡೋಣ
ಪುರವಂತರಿ ಕುಣಿತ
ನೋಡಿ ಬಿಡೋಣ
ನಡಿ ತಮ್ಮ ನಡಿರಣ್ಣ
ವೀರಭದ್ರೇಶ್ವರನ ಜಾತ್ರಿಗಿ

ವೀರಭದ್ರನ ದರ್ಶನ
ಮನಸ್ಸಿಗೆ ಶಾಂತಿ
ಆತ್ಮಿಕ ಕಾಂತಿ ಜಾತ್ರಿಗಿ ಹೋಗೋಣ
ಹುಮನಾಬಾದಿ ವೀರಭದ್ರೇಶ್ವರ
ನಡಿ ತಮ್ಮ ನಡಿರಣ್ಣ
ವೀರಭದ್ರನ ಜಾತ್ರಿಗಿ

## ಭೈರವೇಶ್ವರನ ಪದ

ತೇರು ಬೀದೀಲಿ ಏನೇನು ಐಭೋಗ
ಬಾಯಾರಿ ಬಂದೋರಿಗಿ ಏಳನೀರು ಕಬ್ಬಿನ ತುಂಡು
ತೇರು ಬೀದೀಲಿ ಐಭೋಗ

ವಾಲಗದೇರೀ ಮ್ಯಾಲೆ ಓಲಾಡೋನೀರ ನ್ಯಾರೆ
ಜೋಡು ಕನ್ನರಿ ನುಡಿಸೋನು : ನುಡಿಸೋ ಭೈರವ
ವಾಲಾಡಿ ಗಿರಿಯ ಇಳಿದನು

ಆರು ಸಾವಿರ ಪರಿಸೆ ವಾರದಲ್ಲಿ ಪಲ್ಲಕ್ಕಿ
ಮೆಲ್ಲಾಗೆ ಇಳಿಯೊ ಗಿರಿಗಳ ನಿನತೇರು
ಕಲ್ಲಿನ ಮೇಲೆ ಹರಿದಾವೊ

ಅಗಲನ್ನೆ ತೇರು ಮುಗಿಲು ಮುಟ್ಟುವ ಕಳಸ
ಜಗದೊಡೆಯ ಕೇಳೊ ಭೈರೂವನಿನ ತೇರು
ಆಗವ ತಲ್ಲಣಿಸಿ ಹರಿದಾವೆ

ತೇರು ಹರಿದಾವೆ ತಾನಕೆ ನಿಂತಾವೆ
ತಾನಮಾಡವ್ನೆ ಮಾಳವ್ವ ಭೈರುವನ
ತೇರಿಗೆ ಆರತಿಯ ಬೆಳಿಗ್ಯಾವ್ವೆ

# ಹಂತಿ ಹಾಡು

ಬಡಿಗೇರ ಮಾನಿ ಮುಂದ
ಶಡಗರದ ಗಿಡಹುಟ್ಟಿ
ಕೊರದೆರಡು ಗಾಳಿಸವಮಾಡಿ : ದ್ಯಾಮವ್ವ
ಜಡದು ಎರ್‍ರ್ಯಾಳ ಹೊಸತೇರ
ಕಟ್ಟಾಣಿ ಕಟ್ಟ್ಯಾಳ ಕಟ್ಟಿಮ್ಯಾಲ ಕುಂತಾಳ
ಬಟ್ಟಲಗಣ್ಣಿ ತಿರವ್ಯಾಳ : ದ್ಯಾಮವ್ವ
ಪಟ್ಟದ ಕ್ವಾಣಾ ಕಡಿಸ್ಯಾಳೋ

ಅಸಿಯಾ ಕಗ್ಗಲಿ ಸೌದೆ ರಸಬುಟ್ಟಿ ಬೇಯುವಾಗ
ನಿನ್ನ ಸುಮಕ್ಕು ಕೊಂಡಾಕೆ ಬರುವಾಗ : ದ್ಯಾಮವ್ವ
ರಸವ ಮಕ್ಕಳಿಸಿ ಉಗದಾಳೆ
ಜಾತ್ರಿಗಿ ಜನರೆಲ್ಲಾ ಕರದಾಳೆ

ಕೊಂಡ ಬೇಯಿಸುವಾಗ ಮಕ್ಕಳು ಮುಗ್ಗರಿಸಿದೋ
ಅಂಜಬೇಡ ತಾಯಿ ಗೆಲುವಾಗಿ : ದ್ಯಾಮವ್ವ
ಕೊಂಡಕ್ಕೆ ಧಾರೆ ಎರೆದಾರೆ
ನಿನಗಾಗಿ ಹಡೆದು ಕೊಟ್ಟಾರೆ

# ತೇರು ನೋಡನ

ತೇರು ನೋಡನ ಬನ್ನಿರೋ ತೇರು ತಿಮ್ಮಪ್ಪನ
ಜಾತ್ರೇಗ್ಹೋಗನ ಬನ್ನಿರೋ : ಪಲ್ಲವಿ

ಎಳೂರಪ್ಪಾನಂತೆ ಬಡಗಲ ಬಾಕಲಂತೆ
ಹೊಳೆಯ ತಡಿಯ ಲಿಂಗನು ಸ್ವಾಮೀ ತೇರಾ

ಎಳೂರಪ್ಪಾನಂತೆ ಮೂಡಲ ಬಾಕಲಂತೆ
ನೂರೊಂದ ದೀವ್ಹಿಗೆ ನಂಜುಂಡಸ್ವಾಮಿ ತೇರಾ

ಚುಂಚನಗಿರಿಯಂತೆ ಪಂಚ ಕಲ್ಯಾಣಂತೆ
ಕದ್ದು ತೇರ್ಹರಿಯೋ ಮುದ್ದೂಭೈರೂವನ – ತೇರಾ

ಎಡಗೈಲಿ ಎಣ್ಣಲತೆ ಬಲಗೈಲ್ತುಪ್ಪವಂತೆ
ಮೂಡು ನಾಡಲ್ಲಿರುವೊ ಮೂರೂರ ತಿಬ್ಬಾದೇವಿ ತೇರಾ

ಮೂಡ್ಲಾಗ್ಹರಿಯದು ತೇರು ಮೂನ್ನೂರುಗಾಲಿಯ ತೇರು
ಇನ್ನಾರ ಗಾಲಿಯ ತೇರು ತೇರಾ ನೋಡಲು ಬನ್ನಿರೋ ತೇರಾ

ಕಾಶೀ ಕೆಲಸಾವಂತೆ ಲೋಕ ದಿ ಜನವಂತೆ
ಗುಬ್ಬೀ ವೀರಣ್ಣನ ತೇರಾ  ನೋಡಲು ಬನ್ನಿರೋ–ತೇರಾ

# ರಥವ ನೋಡನು ಬನ್ನಿರೋ

ರಥವ ನೋಡನು ಬನ್ನಿರೋ–ಗೆಣಿಯಾರೆಲ್ಲ
ಹೋಗಿ ನೋಡೆನು ಬನ್ನಿರೋ : ಪಲ್ಲವಿ :

ರಥಕ ರನ್ನದ ಗಾಲ್ಯೋ
ರಥಕ ರನ್ನದ ಗಾಲ್ಯೋ
ಪಿಳ್ಳೇ–ದೊಡ್ಡ ಭಾಪುರಿ ಜಂಗೋ
ಕರ್ನಾಟಕ ಸೂತ್ರದಾರಿ
ಧೀರ ಮ್ಯಡಿಕೇರೀ
ಗಾಢೆ ನೇರೋ ರಥವ–ರಥವ ನೋಡನು

ರಥ ಕೂಡೋ ಹೊತ್ತಿಗೆ
ರಥ ಕೂಡೋ ಹೊತ್ತಿಗೆ
ಒಂದೆ – ಏನೇನ ಸುಂಗಾರವಣ್ಣ
ಏನೇನ ಬಂಗಾರವಣ್ಣ
ಕಾಲಿಗ ಪಂಜೇರ ಕಡಗ
ಕಲ್ಕೀಯ ತುರಾಯಾ
ಗಚ್ಚು ಚಿನ್ನದ ಕಂಬಿ
ಪಾಗು ಸುತ್ತೈದಾನೆ
ಮುತ್ತಿನ ತುರಾಯಗಳೊಂದ
ಇಳಿ ಬಿಟ್ಟೈದಾನೇ

ಹತ್ತು ಮಂದಿ ಮಾನ್ಯವರೊಳಗೆ
ಗುಂಡಿನ ಸರಗಳ ಕೊಡುವೆ
ಗಂಡು ಗೊಡ್ಲೀಲ್ ಸರಸಿ ಕಾಡೋ
ಮುಂಡನೇರೋ ರಥವ ರಥವ ನೋಡನು

ಹರಸೂರು ಮಸರೂರು
ಬಣಿಗಾರ ಬಡಗೇರಣ್ಣಾ
ಕಮ್ಮಾರ ಕಾಮಾಟಿಗ್ರಣ್ಣಿ
ಇಂಗಳದೋರು ಪಿಂಗಳದೋರು
ಕೆಂಗಳ ಗಣ್ಣಿನೆ ಅಮಲ್ದಾರ್‍ರು
ಎಡ್ ಕಟ್ಟೋ ಬಲಕಟ್ಟೋ
ಎಡ್ ಬಜ್ಯೋರ್ ಬಲ ಭಜ್ಯೋರ್
ಚಿನ್ನದೀಟ್ಯೋ ಬೆಳ್ಳಿ ಈಟ್ಯೋ . . . .

## ಕೊಂಡ ಹಾಯುವುದು

ಚೆಂಡನ ಕುಯ್ದು ರುಂಡು ಮಾಡೀ ಪೂಜಾರಣ್ಣ
ಭಂಡಾರಣದ ಭರಣಿ ಬಲಗೈಲಿ – ಹಿಡಕೊಂಡು
ಬೇಗನೆ ಕೆಂಡಾವ ಹೋಗು ಬಾರೋ

ಕೆಂಡಾನ ಹೋಗಾಕೆ ಬಂದೇನು ಬಂಡ್ಯಲ್ಲಿ
ಮತ್ತೇಳು ಬಂಡಿ ಹೋಗುತೀನಿ

ಭಂಡಾರ ನಾ ಕೊಟ್ಟೆ ದಕ್ಷಿಣೆ ನಾ ಕೊಟ್ಟೆ
ಅವ್ವಗೆ ಮೊದಲಾಗಿ ಕೊಡುತೀನಿ–ಪೂಜಾರಣ್ಣ
ಬೇಗ ಕೊಂಡಾವ ಹೋಗುಬಾರೋ

ಕೊಂಡಾವ ಹೋಗಾಗ ಇಡಿಗಾಯ ಒಡಸಣ್ಣ
ಕಾಯೊಡೆದು ಕೈಯ್ಯ ಮುಗಿರಣ್ಣ–ಆಕೆ ಈಗ
ಕೆಂಚಿ ದ್ಯಾಮವ್ವ ನೆಲಿಗೊಂಡು

## ಅಗ್ಗಿ ತುಳಿಯುವುದು

ಕೆಂಡದ ಮೇಲೆ ರುಂಡವ ಬಿಗೀ ಹಿಡಿದು
ಭಂಡಾರ ಬಡಕೊಂಡು ಕಟ್ಟಿಗೆ ಹಿಡಕೊಂಡು
ಬೇಗನೆ ಅಗ್ಗಿವ ತುಳಿಬಾರೋ

ಕೆಂಡಾದ ಮೇಲೆ ಸಹಸ್ರಾರು ಭಕ್ತರು
ಬಂಡಿಯ ತುಂಬ ಕಟ್ಟಿಗೆ ತಾರೋ
ಎಲ್ಲರೂ ಅಗ್ಗಿ ತುಳಿಯೋಣ

ವಿಭೂತಿ ಬಳಕೊಂಡು ತೆಂಗಿನಕಾಯಿ ವಡಕೊಂಡು
ತೇರುಮೈದಾನಕ ಬೇಗ ಬಾರೋ ನನ ತಮ್ಮ
ಅಗ್ಗಿಯ ತುಳಿಯೋಣ ನಾವೆಲ್ಲ

ಅಗ್ಗಿ ತುಳಿವಾಗ ಇಡಿಗಾಯ ಬಡಸಣ್ಣ
ಕಾಯೊಡೆದು ಕೈಯ್ಯ ಮುಗಿರಣ್ಣ ನನ್ನಣ್ಣ
ವೀರಭದ್ರನ ನೆನಕೊಂಡು

## ಕ್ಷೇತ್ರ ದರ್ಶನ

ಕಾಶಿಗೆ ಹೋಗುವ ದಾರೀಲಿ ಕೇಶವನಿದ್ದನು
ಕೇಶವನ ದಯದಿಂದ ಕಾಶಿ ಯಾತ್ರೆ-ಜಾತ್ರೆ ನಮಗಾಯ್ತು
ಬದರಿಕಾಶ್ರಮದಲ್ಲಿ ನಾರಾಯಣನಿದ್ದನು
ನಾರಾಯಣನ ದಯದಿಂದ ಬದರಿಕಾಶ್ರಮವ ನಾಕಂಡೆ
ಪ್ರಯಾಣದಲ್ಲಿ ಮಾಧವನಿದ್ದನು
ಗೋಕುಲದಲ್ಲಿ ಗೋವಿಂದನಿದ್ದನು
ಶರಣನಗರದಲ್ಲಿ ಶರಣ ಬಸಪ್ಪನಿದ್ದನು
ವಿಷ್ಣು ಪಾದದಲ್ಲಿ ಶ್ರೀ ಕೃಷ್ಣನಿದ್ದನು
ಮಧುರೆಯ ದಾರೀಲಿ ಮಧುಸೂಧನನಿದ್ದನು
ತೀರ್ಥದಾ ಹಾದೀಲಿ ತ್ರಿವಿಕ್ರಮನಿದ್ದನು
ವಾಮನನು ನಮಗೆ ಬಲಿದು ಬಂದಿದ್ದನು
ವಾಮನನ ದಯದಿಂದ ವೈಕುಂಠವ ನಾಕಂಡೆ

ಶ್ರೀಧರನು ನಮ್ಮ ಹೃದಯ ಕಮಲದಲ್ಲಿದ್ದನು
ಶ್ರೀಧರನ ದಯದಿಂದ ಲಕ್ಷ್ಮಿಪತಿಯ ನಾಕಂಡೆ
ಋಷಿಯಾಶ್ರಯದಲ್ಲಿ ಶ್ರೀಹೃಷೀಕೇಶನಿದ್ದನು
ಮೊಡವಿಯಾ ಮೇಲೆ ಶ್ರೀ ಧಾಮೋದರನಿದ್ದನು
ಸಕಲ ತೀರ್ಥದಲ್ಲಿ ಸಲಕರುಷಣನಿದ್ದನು
ವಸುಧೆಯಾ ಮೇಲೆ ವಾಸುದೇವನಿದ್ದನು
ವೃದ್ಧೆ ಗಂಗೆಯಲ್ಲಿ ಪ್ರದ್ಯುಮ್ನನಿದ್ದನು
ಪುಣ್ಯ ವೇದಾರ್ಥದಲ್ಲಿ ಪುರುಷೋತ್ತಮನಿದ್ದನು
ತಿಳಕಾ ನದಿಯಲ್ಲಿ ಅನುರುದ್ಧನಿದ್ದನು
ಪುರುಷೋತ್ತಮನ ದಯದಿಂದ ಪುಣ್ಯವೇದಾರ್ಥ ಕಂಡೆ
ವೈತರಣೀ ನದಿಯಲ್ಲಿ ಅದೋಕ್ಷ ಜನಿಸಿದ್ದನು
ನರ್ಮದಾ ನದಿಯಲ್ಲಿ ನರಸಿಂಹನಿದ್ದನು
ವಿಷ್ಣು ಪಾದದಲ್ಲಿ ಅಚ್ಯುತನಿದ್ದನು
ಜಾಹ್ನವಿಯ ಜನಕ ಜನಾರ್ಧನನಿದ್ದನು
ಜನಾರ್ಧನನ ದಯದಿಂದ ಜನನ ಮರಣವ ಕಳೆದ
ಉಡುಪಿಯ ದಾರೀಲಿ ಉಪೇಂದ್ರನಿದ್ದನು
ಸರಯೂ ನದಿಯಲ್ಲಿ ಶ್ರೀ ಹರಿಯ ಕಂಡೆನು
ಶ್ರೀ ಹರಿಯ ದಯದಿಂದ ಹುಟ್ಟು ಸಾವನು ಕಳೆದೆ

## ನಿಲ್ಲಿಸು ನಿನ್ನ ರಥವ

ನಿಲ್ಲಿಸೇ ನಿಲ್ಲಿಸು ನಿನ್ನ ರಥವಾ
ಜಗ್ಗು ಮಾಡಬ್ಯಾಡ ರಥವಾ
ನಿಲ್ಲಿಸೇ ನಿಲ್ಲಿಸೆ ನಿನ್ನಾ ರಥವಾ

ಗೊಲ್ಲರ್ಹಟ್ಟಿಗೆ ಕಾಳಿಂಗ ಸತ್ತಿ
ಮುದುಕುದ್ದಳ್ಳಿಗೆ ಎಲ್ಲಮ್ಮ ಸತ್ತಿ
ನಾಯಕನ್ಹಟ್ಟಿಗೆ ತಿಪ್ಪೆಯ ರುದ್ರ
ನೀ ದಯೆವಿರಲೋ . . . . ನಿಲಿಸೇ . . . .

ಕಣಕುಪ್ಪಿಗೆ ಮಾರಮ್ಮ ಸತ್ತಿ
ವಡ್ಡರ್ಹಳ್ಳಿಗೆ ಸೌಡಮ ಸತ್ತಿ
ಜಗಲೂರಿಗೆ ಪಾಪಯ್ಯಲಿಂಗಾ
ನೀ ದಯವಿರಲೋ . . . . ನಿಲಿಸೆ . . . .

## ಬೀದರ ಜಿಲ್ಲೆಯಲ್ಲಿ ನಡೆಯುವ ದೇವರೊತ್ಸಗಳು ಸೂಚಿ

| ಕ್ರಮ ಸಂಖ್ಯೆ | ಉತ್ಸವ ಜರುಗುವ ಸ್ಥಳ | ತಾಲ್ಲೂಕು | ಜಿಲ್ಲೆ | ತಿಂಗಳು | ದೇವತೆಯ ಹೆಸರು | ಉತ್ಸವ ಜರುಗುವ ಒಟ್ಟು ದಿನಗಳು | ಉತ್ಸವಕ್ಕೆ ಬರುವ ಅಂದಾಜು ಭಕ್ತಾದಿಗಳ ಸಂಖ್ಯೆ |
|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ |
| ೧ | ಬೀದರ | ಬೀದರ | ಬೀದರ | ಪ್ರತಿ ಶನಿವಾರ | ನರಸಿಂಹ | -- | ೨,೦೦೦ = ೦೦ |
| ೨ | ಯರನಳ್ಳಿ | ಭಾಲ್ಕಿ | ಬೀದರ | ಯುಗಾದಿ ಹಬ್ಬ | ಮಾಣಿಕೇಶ್ವರ | ೭ದಿನ | ೪,೦೦೦ = ೦೦ |
| ೩. | ಬೀದರ | ಬೀದರ | ಬೀದರ | ಕಾರ್ತಿಕ ಪೂರ್ಣಿಮೆ | ಗುರುನಾನಕ | ೩ದಿನ | ೨,೦೦೦ = ೦೦ |
| ೪. | ಅಷ್ಟೂರ | ಬೀದರ | ಬೀದರ | ಚೈತ್ರಮಾಸ | ಅಲ್ಲಮಪ್ರಭು | ೩ದಿನ | ೫,೦೦೦ = ೦೦ |
| ೫. | ಕರಕನಳ್ಳಿ | ಹುಮನಾಬಾದ | ಬೀದರ | ಮಾರ್ಚ | ಬಕ್ಕಪ್ರಭು | ೫ದಿನ | ೧೫,೦೦೦ = ೦೦ |
| ೬. | ಖೇಳಗಿ | ಬಸವಕಲ್ಯಾಣ | ಬೀದರ | ಏಪ್ರಿಲ್ | ಶಿವಲಿಂಗೇಶ್ವರ | ೨ದಿನ | ೨,೦೦೦ = ೦೦ |
| ೭. | ನಾವದಗೇರಿ | ಬೀದರ | ಬೀದರ | ಫಾಲ್ಗುಣಮಾಸ | ಮಡಿವಾಳೇಶ್ವರ | ೪ದಿನ | ೫,೦೦೦ = ೦೦ |
| ೮. | ಬೀದರ | ಬೀದರ | ಬೀದರ | ಡಿಸೆಂಬರ – ೨೫ | ಏಸುಕ್ರೈಸ್ತ | ೨ದಿನ | ೧೦,೦೦೦ = ೦೦ |
| ೯. | ಬೀದರ | ಬೀದರ | ಬೀದರ | ಆಗಸ್ಟ್–ಸೆಪ್ಟೆಂಬರ | ಮೌನಿಶ್ರಿ | ೩ದಿನ | ೩,೦೦೦ = ೦೦ |
| ೧೦. | ಬೀದರ | ಬೀದರ | ಬೀದರ | ರಂಜಾನ್ ತಿಂಗಳು | ಮುಲ್ತಾನಿಪಾಷಾ | ೫ದಿನ | ೧೦,೦೦೦ = ೦೦ |
| ೧೧. | ಬೀದರ | ಬೀದರ | ಬೀದರ | ಆಷಾಡಪೂರ್ಣಿಮೆ | ವಿಠ್ಠಲ | ೩ದಿನ | ೧೦,೦೦೦ = ೦೦ |
| ೧೨. | ಇಟಗಾ | ಹುಮನಾಬಾದ | ಬೀದರ | ಮಾರ್ಚ–ಏರ್ಪಿಲ್ | ಭದ್ರೇಶ್ವರ | ೪ದಿನ | ೫,೦೦೦ = ೦೦ |
| ೧೩. | ಬಸವಕಲ್ಯಾಣ | ಬಸವಕಲ್ಯಾಣ | ಬೀದರ | ಏರ್ಪಿಲ್ – ಮೇ | ಬಸವಣ್ಣ | ೩ದಿನ | ೫೦,೦೦೦ = ೦೦ |
| ೧೪. | ಬೀದರ | ಬೀದರ | ಬೀದರ | ಶಿವರಾತ್ರಿ | ಪಾಪನಾಶಿನಿ | ೩ದಿನ | ೫೦,೦೦೦ = ೦೦ |
| ೧೫. | ಖಾನಾಪುರ | ಭಾಲ್ಕಿ | ಬೀದರ | ಡಿಸೆಂಬರ | ಮೈಲಾರ ಲಿಂಗ | ೩ದಿನ | ೫೦,೦೦೦ = ೦೦ |
| ೧೬. | ಬೆನಕನಳ್ಳಿ | ಬೀದರ | ಬೀದರ | ಜನವರಿ (ಪ್ರತಿ ಮಂಗಳವಾರ) | ಎಲ್ಲಮ್ಮ | ಪ್ರತಿ ವಾರ | ೨,೦೦೦ = ೦೦ |

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ೧೭. | ಹಾರಕೂಡ | ಬಸವಕಲ್ಯಾಣ | ಬೀದರ | ಜನವರಿ | ಚನ್ನಬಸವೇಶ್ವರ | ೩ದಿನ | ೧೦,೦೦೦ = ೦೦ |
| ೧೮. | ಹುಮನಾಬಾದ | ಹುಮನಾಬಾದ | ಬೀದರ | ಡಿಸೆಂಬರ | ವೀರಭದ್ರೇಶ್ವರ | ೧೨ದಿನ | ೫೦,೦೦೦ = ೦೦ |
| ೧೯. | ರಾಜಗೀರಾ | ಬೀದರ | ಬೀದರ | ಬಾದಾಮಿ-ಅಮವಾಸ್ಯೆ | ಮಾರಮ್ಮ | ೨ದಿನ | ೨,೦೦೦ = ೦೦ |

# ಸಂದರ್ಶಕರ ಸೂಚಿ

| ಕ್ರಮ ಸಂಖ್ಯೆ | ಸಂದರ್ಶಕರ ಹೆಸರು | ವಯಸ್ಸು | ಉದ್ಯೋಗ | ಶಿಕ್ಷಣ | ವಿಳಾಸ |
|---|---|---|---|---|---|
| ೧ | ೨ | ೩ | ೪ | ೫ | ೬ |
| ೧. | ಆರ್.ವಿ. ಬಿರಾದಾರ | ೫೩ | ಕೃಷಿ | ಹತ್ತನೆ | ಗ್ರಾಮ : ಕಾಡವಾದ<br>ತಾ : ಬೀದರ ಜಿ : ಬೀದರ |
| ೨. | ಅಣೆಪ್ಪಾ ಪಾಟೀಲ | ೫೮ | ಕೃಷಿ | ಇಲ್ಲ | ಗ್ರಾಮ : ಕಪ್ಲಾಪುರ<br>ತಾ : ಜಿ : ಬೀದರ |
| ೩. | ಅಪ್ಪಾರಾವ ಪಾಟೀಲ | ೫೫ | ಕೃಷಿ | ೫ನೇ | ಗ್ರಾಮ : ನಾವದಗೇರಿ<br>ತಾ : ಜಿ : ಬೀದರ |
| ೪. | ಎಸ್. ಬಸವರಾಜ | ೩೬ | ಕೃಷಿ | ೮ನೇ | ಗ್ರಾಮ : ಬೀದರ<br>ತಾ : ಜಿ : ಬೀದರ |
| ೫. | ಕಲ್ಲಮ್ಮ ಬುಸೆಟ್ಟಿ | ೩೦ | ಕೃಷಿ | ಇಲ್ಲ | ಗ್ರಾಮ : ಮರಕಲ<br>ತಾ : ಜಿ : ಬೀದರ |
| ೬. | ಕಲ್ಲಮಟ್ಟಸ್ವಾಮಿ | ೩೫ | ಕೃಷಿ | ಇಲ್ಲ | ಗ್ರಾಮ : ಚಿಟುಗುಪ್ಪಾ<br>ತಾ : ಹುಮನಾಬಾದ<br>ಜಿ : ಬೀದರ |
| ೭. | ಕಲ್ಯಾಣರಾವ ವೀರಪ್ಪ | ೪೫ | ಕೃಷಿ | ೭ನೇ | ಗ್ರಾಮ : ಖಾನಾಪುರ<br>ತಾ : ಭಾಲ್ಕಿ, ಜಿ : ಬೀದರ |
| ೮. | ಕೆ. ರವೀಂದ್ರ ಕುಮಾರ | ೩೭ | ಕೃಷಿ | ೧೦ನೇ | ಗ್ರಾಮ : ಹಮೀಲಾಪೂರ<br>ತಾ : ಜಿ : ಬೀದರ |

| ೧ | ೨ | ೩ | ೪ | ೫ | ೬ |
|---|---|---|---|---|---|
| ೯. | ಗಂಗಮ್ಮ .ಎಸ್. | ೪೨ | ಮನೆಗೆಲಸ | ೭ನೇ | ಗ್ರಾಮ : ನಾವದಗೇರಿ<br>ತಾ : ಜಿ : ಬೀದರ |
| ೧೦. | ಗಣಪತಿ ಎಸ್. | ೩೯ | ಒಕ್ಕಲುತನ | ೧೦ನೇ | ಗ್ರಾಮ : ಮರಕಲ<br>ತಾ : ಜಿ : ಬೀದರ |
| ೧೧. | ಚನ್ನಮ್ಮ ಬಿರಾದಾರ | ೪೧ | ಮನೆಕೆಲಸ | ಇಲ್ಲ | ಗ್ರಾಮ : ಗುನ್ನಳ್ಳಿ<br>ತಾ : ಜಿ : ಬೀದರ |
| ೧೨. | ಗುರುನಾಥರಾವ | ೩೭ | ಗುಮಾಸ್ತ | ಬಿ.ಎ. | ಗ್ರಾಮ : ಗೋರ್ಟಾ<br>ತಾ : ಬಸವಕಲ್ಯಾಣ<br>ಜಿ : ಬೀದರ |
| ೧೩. | ಗುಂಡಮ್ಮ ಬಿ. | ೫೫ | ಕೃಷಿ | ಇಲ್ಲ | ಗ್ರಾಮ : ಹಿಪ್ಪಳಗಾಂವ<br>ತಾ : ಜಿ : ಬೀದರ |
| ೧೪. | ಕುಲಕರ್ಣಿ ನಿರ್ಮಲಾ | ೧೯ | ವಿದ್ಯಾರ್ಥಿನಿ | ಬಿ.ಎ. | ಗ್ರಾಮ : ಗೌರ<br>ತಾ : ಬಸವಕಲ್ಯಾಣ<br>ಜಿ : ಬೀದರ |
| ೧೫. | ಕಲ್ಲಯ್ಯ | ೩೪ | ಕೃಷಿ | ಇಲ್ಲ | ಗ್ರಾಮ : ನಾವದಗೇರಿ<br>ತಾ : ಜಿ : ಬೀದರ |
| ೧೬. | ವೀರಪ್ಪ ಮಾದಪ್ಪ | ೫೭ | ಕೃಷಿ | ಇಲ್ಲ | ಗ್ರಾಮ : ಖಾನಾಪುರ<br>ತಾ : ಭಾಲ್ಕಿ<br>ಜಿ : ಬೀದರ |
| ೧೭. | ಬಸವರಾಜ ಪಾಟೀಲ | ೪೯ | ಕೃಷಿ | ೭ನೇ | ಗ್ರಾಮ : ಅಲ್ಲಾಪುರ<br>ತಾ : ಜಿ : ಬೀದರ |

| ೧ | ೨ | ೩ | ೪ | ೫ | ೬ |
|---|---|---|---|---|---|
| ೧೮. | ಜಹೀರ್ ಪಾಷಾ | ೩೬ | ತರಕಾರಿ ವ್ಯಾಪಾರಿ | ಇಲ್ಲ | ಗ್ರಾಮ : ಹುಮನಾಬಾದ<br>ತಾ : ಜಿ : ಬೀದರ |
| ೧೯. | ಲಾಲಸಾಹೇಬ | ೪೮ | ಕೂಲಿ | ಇಲ್ಲ | ಗ್ರಾಮ : ಕಿಟ್ಟಾ<br>ತಾ : ಬಸವಕಲ್ಯಾಣ<br>ಜಿ : ಬೀದರ |
| ೨೦. | ರಾಜಕುಮಾರ | ೨೮ | ವ್ಯಾಪಾರಸ್ಥ | ಬಿ.ಎ. | ಗ್ರಾಮ : ಕಡ್ಯಾಳ<br>ತಾ : ಭಾಲ್ಕಿ<br>ಜಿ : ಬೀದರ |
| ೨೧. | ಶರಣಪ್ಪ ಶೆಟಕಾರ | ೫೬ | ವ್ಯಾಪಾರಸ್ಥ | ೧೦ನೇ | ಗ್ರಾಮ : ಬೀದರ<br>ತಾ : ಜಿ : ಬೀದರ |
| ೨೨. | ಪಾರ್ವತಿ ಸ್ವಾಮಿ | ೨೪ | ವಿದ್ಯಾರ್ಥಿನಿ | ಬಿ.ಎ.ಬಿಇಡ್ | ಗ್ರಾಮ : ಬೀದರ<br>ತಾ : ಜಿ : ಬೀದರ |
| ೨೩. | ವೀರಭದ್ರಪ್ಪಾ | ೬೫ | ನಿವೃತ್ತ ಶಿಕ್ಷಕ | ಟಿ.ಸಿ.ಹೆಚ್ | ಗ್ರಾಮ : ಅಷ್ಟೂರ<br>ತಾ : ಜಿ : ಬೀದರ |
| ೨೪. | ಬಸವರಾಜ | ೪೪ | ಕೃಷಿ | ಏಳನೇ | ಗ್ರಾಮ : ಗಾದಗಿ<br>ತಾ : ಜಿ : ಬೀದರ |

# ಗ್ರಂಥ ಸೂಚಿ : -


೧) ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ (೧೯೮೨)
ಲೇಖಕರು : ಬಸವರಾಜ ಸಬರದ
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ

೨) ಕರ್ನಾಟಕದ ಜಾತ್ರೆಗಳು
ಲೇಖಕರು : ಸಿ.ಎಸ್. ಶಿವಕುಮಾರ ಸ್ವಾಮಿ(೧೯೮೮)
ಮೈಸೂರು ವಿಶ್ವವಿದ್ಯಾಲಯ

೩) ಹಬ್ಬಗಳು – ಜಾತ್ರೆಗಳು(೧೯೮೪)
ಲೇಖಕರು : ರಮೇಶ ಬಿ.ಗೊ
ಹಂಸಧ್ವನಿ ಪ್ರಕಾಶನ, ಬೆಂಗಳೂರು.

೪) ಕಿರಿಯರ ಕರ್ನಾಟಕ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫) ಕನ್ನಡ ನಾಡಿನ ಧಾರ್ಮಿಕ ಪರಂಪರೆ(೧೯೮೩)
ಲೇಖಕರು : ರಾಮಚಂದ್ರರಾವ ಎಸ್.ಕೆ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೬) ಭಾರತೀಯ ದೇವಾಲಯಗಳ ಜಾನಪದ ಮೂಲ(೧೯೮೧)
ಲೇಖಕರು : ರಾಮಚಂದ್ರರಾವ ಎಸ್.ಕೆ.
ಐಬಿಹೆಚ್ ಪ್ರಕಾಶನ, ಬೆಂಗಳೂರು

೭) ಕರ್ನಾಟಕದ ಗ್ರಾಮ ದೇವತೆಗಳು (೧೯೮೪)
ಲೇಖಕರು : ಲಿಂಗಯ್ಯ .ಡಿ.
ಐಬಿಹೆಚ್ ಪ್ರಕಾಶನ, ಬೆಂಗಳೂರು

೮) ಭಾಲ್ಕಿ ತಾಲ್ಲೂಕು ದರ್ಶನ
ಲೇಖಕರು : ಜಿ.ಬಿ. ವಿಸಾಜಿ
ಐಬಿಹೆಚ್ ಪ್ರಕಾಶನ, ಬೆಂಗಳೂರು

೯) ಹಬ್ಬ–ಹರಿದಿನಗಳು
ಲೇಖಕರು : ಸ್ವಾಮಿ ಎಸ್.ಬಿ.
ನವೀನ ಪ್ರಕಾಶನ ಬೆಂಗಳೂರು

೧೦) ವೀರಭದ್ರ
ಲೇಖಕರು : ಜಗನ್ನಾಥ ಹೆಬ್ಬಾಳೆ
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ
ಬೆಂಗಳೂರು

೧೧) ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ
ಭಾಗ – ೨ ಜಾತ್ರೆಗಳು
ಲೇಖಕರು : ಹಿರೇಮಠ ಎಸ್.ಬಿ.
ಸಮತಾ ಪ್ರಕಾಶನ ಹೊಸಪೇಟೆ

೧೨) ಕನ್ನಡ ಜಾನಪದ ವಿಶ್ವಕೊಶ
(ಸಂಪುಟ೧ ಮತ್ತು ೨)
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು.

೧೩) ಬೀದರ ಜಿಲ್ಲಾ ದರ್ಶನ
ಸಂಪಾದಕರು : ಡಾ. ಜಗನ್ನಾಥ ಹೆಬ್ಬಾಳೆ

# ಬೀದರ ಜಿಲ್ಲೆಯ ಪ್ರಮುಖ ದೇವರೋತ್ಸವಗಳ ಪಟ್ಟಿ

೧) ಬೀದರಿನ ನರಸಿಂಹನ ದೇವರೋತ್ಸವ
೨) ಕಲ್ಲೂಡ ಮಾಣಿಕೇಶ್ವರ ದೇವರೋತ್ಸವ
೩) ಬೀದರಿನ ಗುರುನಾನಕ ಉತ್ಸವ
೪) ಅಷ್ಟೂರಿನ ಅಲ್ಲಮಪ್ರಭು ದೇವರೋತ್ಸವ
೫) ಬಕ್ಕಪ್ರಭು ದೇವರೋತ್ಸವ
೬) ಖೇಳಗಿ ಶಿವಲಿಂಗೇಶ್ವರ ದೇವರೋತ್ಸವ
೭) ನಾವದಗೇರಿ ಮಡಿವಾಳೇಶ್ವರ ದೇವರೋತ್ಸವ
೮) ಬೀದರಿನ ಮೌನಿಶ್ರೀಗಳ ದೇವರೋತ್ಸವ
೯) ಕ್ರೈಸ್ತರ ವಾರ್ಷಿಕ ಉತ್ಸವ
೧೦) ಬೀದರಿನ ಮುಲ್ತಾನಿಪಾಶಾ ಉರುಸ್
೧೧) ಬೀದರಿನ ವಿಠಲನ ದೇವರೋತ್ಸವ
೧೨) ಇಟಗಾ ಭದ್ರೇಶ್ವರ ದೇವರೋತ್ಸವ
೧೩) ಬಸವಕಲ್ಯಾಣದ ಬಸವಣ್ಣನ ದೇವರೋತ್ಸವ
೧೪) ಬೀದರಿನ ಪಾಪನಾಶಿನಿ ದೇವರೋತ್ಸವ
೧೫) ಖಾನಾಪೂರ ಮೈಲಾರಲಿಂಗ ದೇವರೋತ್ಸವ
೧೬) ಬೆನಕನಳ್ಳಿ ಎಲ್ಲಮ್ಮ ದೇವರೋತ್ಸವ
೧೭) ಹಾರಕೂಡ ಚನ್ನಬಸವೇಶ್ವರ ದೇವರೋತ್ಸವ
೧೮) ಹುಮನಾಬಾದ ವೀರಭದ್ರೇಶ್ವರ ದೇವರೋತ್ಸವ
೧೯) ರಾಜಗೀರಾ ಮಾರಮ್ಮನ ಉತ್ಸವ

